KA / BG-GPO / 2515 / WPP-47 / 2006-2008



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೨ | ಬೆಂಗಳೂರು, ಗುರುವಾರ, ಆಗಸ್ಟ್ ೨೩, ೨೦೦೭ (ಭಾದ್ರಪದ ೧, ಶಕ ವರ್ಷ ೧೯೨೯) | ಸಂಚಿಕೆ ೩೪ |
|---|---|---|

## ಭಾಗ – ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ:** ಬೆಂಗಳೂರು ವೈದ್ಯಕೀಯ ಕಾಲೇಜು ಮತ್ತು ಸಂಶೋಧನಾ ಸಂಸ್ಥೆ, ಮೈಸೂರು ವೈದ್ಯಕೀಯ ಕಾಲೇಜು ಮತ್ತು ಸಂಶೋಧನಾ ಸಂಸ್ಥೆ ಹಾಗೂ ಬೆಂಗಳೂರಿನ ಸರ್ಕಾರಿ ದಂತ ಕಾಲೇಜು ಮತ್ತು ಸಂಶೋಧನಾ ಸಂಸ್ಥೆ ಇವುಗಳಲ್ಲಿ ಖಾಲಿ ಇರುವ ಹುದ್ದೆಗಳನ್ನು ಭರ್ತಿ ಮಾಡಲು ಸರ್ಕಾರದ ಮಂಜೂರಾತಿ.

**ಓದಲಾಗಿದೆ:**
1. ದಿನಾಂಕ:16-11-2006 ಸಂಖ್ಯೆ:ಆಕುಕ 19 ಎಂಪಿಎಸ್ 2005ರ ಸರ್ಕಾರಿ ಆದೇಶ.
2. ದಿನಾಂಕ:17-01-2007 ಸಂಖ್ಯೆ:ಆಕುಕ 19 ಎಂಪಿಎಸ್ 2005ರ ಸರ್ಕಾರಿ ಆದೇಶ.
3. ದಿನಾಂಕ:22-03-2007 ಸಂಖ್ಯೆ:ಎಸ್ಆರ್ಒ(1)39/06-07ರ ವೈದ್ಯಕೀಯ ಶಿಕ್ಷಣ ನಿರ್ದೇಶಕರ ಪತ್ರ.

**ಪ್ರಸ್ತಾವನೆ:**

ಮೇಲೆ (1) ಮತ್ತು (2)ರಲ್ಲಿ ಓದಲಾದ ಸರ್ಕಾರಿ ಆದೇಶಗಳಲ್ಲಿ ಬೆಂಗಳೂರು ವೈದ್ಯಕೀಯ ಕಾಲೇಜು, ಮೈಸೂರು ವೈದ್ಯಕೀಯ ಕಾಲೇಜು ಮತ್ತು ಸರ್ಕಾರಿ ದಂತ ಕಾಲೇಜುಗಳಿಗೆ ಸ್ವಾಯತ್ತತೆ ಸ್ಥಾನಮಾನ ನೀಡಿ ಅವುಗಳನ್ನು ಬೆಂಗಳೂರು ವೈದ್ಯಕೀಯ ಕಾಲೇಜು ಮತ್ತು ಸಂಶೋಧನಾ ಸಂಸ್ಥೆ, ಮೈಸೂರು ವೈದ್ಯಕೀಯ ಕಾಲೇಜು ಮತ್ತು ಸಂಶೋಧನಾ ಸಂಸ್ಥೆ ಹಾಗೂ ಸರ್ಕಾರಿ ದಂತ ಕಾಲೇಜು ಮತ್ತು ಸಂಶೋಧನಾ ಸಂಸ್ಥೆ ಎಂದು ಘೋಷಿಸಲಾಗಿದೆ. ಈ ಹಿನ್ನೆಲೆಯಲ್ಲಿ ಸದರಿ ಸಂಸ್ಥೆಗಳಲ್ಲಿ ಖಾಲಿ ಇರುವ ಬೋಧಕ ಹುದ್ದೆಗಳನ್ನು ತುಂಬುವುದು ಅಗತ್ಯವು ಹಾಗೂ ಅನಿವಾರ್ಯವು ಆಗಿದೆ. ಈಗ ಇರುವ ಬೋಧಕ ಸಿಬ್ಬಂದಿಗಳಿಗೆ ಖಾಲಿ ಇರುವ ಹುದ್ದೆಗಳಿಗೆ ಬಡ್ತಿ ನೀಡಿ ತುಂಬಲು ಪರಿಶೀಲಿಸಲಾಗಿದೆ.

ಮೇಲೆ (3)ರಲ್ಲಿ ಓದಲಾದ ಪತ್ರದಲ್ಲಿ ವೈದ್ಯಕೀಯ ಶಿಕ್ಷಣ ನಿರ್ದೇಶಕರು ಸ್ವಾಯತ್ತ ಸಂಸ್ಥೆಗಳಲ್ಲಿ ಖಾಲಿ ಇರುವ ಹುದ್ದೆಗಳನ್ನು ಕೂಡಲೇ ಭರ್ತಿ ಮಾಡುವಂತೆ ಪ್ರಸ್ತಾಪಿಸಿರುತ್ತಾರೆ. ಎಂಸಿಐ ನಿಯಮಗಳ ಪ್ರಕಾರ ಖಾಲಿ ಇರುವ ಹುದ್ದೆಗಳನ್ನು ದೀರ್ಘಾವಧಿಯವರೆಗೆ ತುಂಬದೇ ಹೋದಲ್ಲಿ ಇಲಾಖೆಗಳನ್ನು ಡೀರೆಕೈಗ್ನೈಜ್ ಮಾಡುವ ಸಂಭವ ಇರುವುದರಿಂದ ಖಾಲಿ ಇರುವ ಹುದ್ದೆಗಳನ್ನು ಈ ಕೆಳಕಂಡ ಅರ್ಹ ಉಪನ್ಯಾಸಕರು/ಸಹಾಯಕ ಪ್ರಾಧ್ಯಾಪಕರುಗಳಿಗೆ ಬಡ್ತಿ ನೀಡುವ ಮೂಲಕ ತುಂಬಲು ಪರಿಶೀಲಿಸಿ ಈ ಕೆಳಗಿನಂತೆ ಆದೇಶ ಮಾಡಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ:ಆಕುಕ 34 ಎಂಎಂಸಿ 2007(ಪಿ), ಬೆಂಗಳೂರು, ದಿನಾಂಕ: 8ನೇ ಮೇ 2007**

ಬೆಂಗಳೂರು ವೈದ್ಯಕೀಯ ಕಾಲೇಜು ಮತ್ತು ಸಂಶೋಧನಾ ಸಂಸ್ಥೆ, ಮೈಸೂರು ವೈದ್ಯಕೀಯ ಕಾಲೇಜು ಮತ್ತು ಸಂಶೋಧನಾ ಸಂಸ್ಥೆ ಹಾಗೂ ಬೆಂಗಳೂರಿನ ಸರ್ಕಾರಿ ದಂತ ಕಾಲೇಜು ಮತ್ತು ಸಂಶೋಧನಾ ಸಂಸ್ಥೆ ಇವುಗಳಲ್ಲಿ ಖಾಲಿ ಇರುವ ಎಲ್ಲಾ ಬೋಧಕ ಹುದ್ದೆಗಳನ್ನು ಈ ಕೆಳಕಂಡ ಅರ್ಹ ವೈದ್ಯರುಗಳಿಗೆ ಬಡ್ತಿ ನೀಡುವ ಮೂಲಕ ತುಂಬಲು ಸರ್ಕಾರದ ಮಂಜೂರಾತಿಯನ್ನು ನೀಡಲಾಗಿದೆ.

**ಸಹಾಯಕ ಪ್ರಾಧ್ಯಾಪಕ ಹುದ್ದೆಯಿಂದ ಪ್ರಾಧ್ಯಾಪಕ ಹುದ್ದೆಗೆ:**

**1. ಶಸ್ತ್ರಚಿಕಿತ್ಸಾ ಶಾಸ್ತ್ರ ವಿಭಾಗ:-**

| | | | |
|---|---|---|---|
| 1) | ಡಾ: ಕೆ. ಶೇಷಗಿರಿರಾವ್ | - | 01-06-2007 ರಿಂದ ಜಾರಿಗೆ ಬರುವಂತೆ |
| 2) | ಡಾ: ರಮೇಶ್ ಮಹಾದೇವ್ ತಂಬಟ್ | - | 06-06-2007 ರಿಂದ ಜಾರಿಗೆ ಬರುವಂತೆ |
| 3) | ಡಾ: ಸಿ.ಎಸ್. ಚಿಕ್ಕಮನ್ | - | 01-09-2007 ರಿಂದ ಜಾರಿಗೆ ಬರುವಂತೆ |

**2. ಶರೀರಕ್ರಿಯಾ ಶಾಸ್ತ್ರ ವಿಭಾಗ:-**

1) ಡಾ: ಹೆಚ್. ಶಿವಪ್ರಸಾದ್ - ತಕ್ಷಣದಿಂದ ಜಾರಿಗೆ ಬರುವಂತೆ

**3. ಮನೋರೋಗ ಶಾಸ್ತ್ರ ವಿಭಾಗ:-**

1) ಡಾ: ಹೆಚ್. ಚಂದ್ರಶೇಖರ್ - 18-05-2007 ರಿಂದ ಜಾರಿಗೆ ಬರುವಂತೆ

**4. ಕಿವಿ ಮೂಗ ಗಂಟಲು ವಿಭಾಗ:-**

1) ಡಾ: ಬಿ. ವಿಶ್ವನಾಥ್ - 20-09-2007 ರಿಂದ ಜಾರಿಗೆ ಬರುವಂತೆ

**5. ನೇತ್ರ ಚಿಕಿತ್ಸಾ ಶಾಸ್ತ್ರ:-**

1) ಡಾ: ಹೆಚ್.ಟಿ. ವೆಂಕಟೇಗೌಡ - ತಕ್ಷಣದಿಂದ ಜಾರಿಗೆ ಬರುವಂತೆ

**ಉಪನ್ಯಾಸಕರ ಹುದ್ದೆಯಿಂದ ಸಹಾಯಕ ಪ್ರಾಧ್ಯಾಪಕರ ಹುದ್ದೆಗೆ:-**

**6. ಔಷಧ ಶಾಸ್ತ್ರ ವಿಭಾಗ:-**

1) ಡಾ: ಸೈಯದ್ ಮೊಹಿಸಿನ್ - ತಕ್ಷಣದಿಂದ ಜಾರಿಗೆ ಬರುವಂತೆ
2) ಡಾ: ಕವಿತಾ ರಾಜರತ್ನೆ - ತಕ್ಷಣದಿಂದ ಜಾರಿಗೆ ಬರುವಂತೆ

**7. ರೋಗಲಕ್ಷಣಶಾಸ್ತ್ರ ವಿಭಾಗ:-**

1) ಡಾ: ಕುರುಬ ಶ್ರೀಲಕ್ಷ್ಮಿ - ತಕ್ಷಣದಿಂದ ಜಾರಿಗೆ ಬರುವಂತೆ
2) ಡಾ: ಆಶಾಲತ - ತಕ್ಷಣದಿಂದ ಜಾರಿಗೆ ಬರುವಂತೆ
3) ಡಾ: ಸಿ. ನಿರ್ಮಲಾ - ತಕ್ಷಣದಿಂದ ಜಾರಿಗೆ ಬರುವಂತೆ
4) ಡಾ: ಬಿ.ಲತಾ - ತಕ್ಷಣದಿಂದ ಜಾರಿಗೆ ಬರುವಂತೆ
5) ಡಾ: ಜಿ.ಎಸ್. ಶಾರದಾ ಮಣಿ - ತಕ್ಷಣದಿಂದ ಜಾರಿಗೆ ಬರುವಂತೆ
7) ಡಾ: ವಾಣಿ ರವಿಕುಮಾರ್ - ತಕ್ಷಣದಿಂದ ಜಾರಿಗೆ ಬರುವಂತೆ

**8. ಪಿ ಅಂಡ್ ಎಸ್.ಎಂ. ವಿಭಾಗ:-**

1) ಡಾ: ರಿಯಾಜ್ ಬಾಷ್ ಎಸ್. - ತಕ್ಷಣದಿಂದ ಜಾರಿಗೆ ಬರುವಂತೆ
2) ಡಾ: ಎನ್. ರಾಮಕೃಷ್ಣ ರೆಡ್ಡಿ - ತಕ್ಷಣದಿಂದ ಜಾರಿಗೆ ಬರುವಂತೆ

**9. ವೈದ್ಯಶಾಸ್ತ್ರ ವಿಭಾಗ:-**

1) ಡಾ: ಬಿ. ದಿನೇಶ್ - ತಕ್ಷಣದಿಂದ ಜಾರಿಗೆ ಬರುವಂತೆ
2) ಡಾ: ಎ.ಸಿ. ನಿರ್ಮಲ - ತಕ್ಷಣದಿಂದ ಜಾರಿಗೆ ಬರುವಂತೆ
3) ಡಾ: ಜೆ. ಇನ್ಬನಾಥನ್ - ತಕ್ಷಣದಿಂದ ಜಾರಿಗೆ ಬರುವಂತೆ
4) ಡಾ: ಲಕ್ಷ್ಮೀಗೌಡ - 15-10-2007 ರಿಂದ ಜಾರಿಗೆ ಬರುವಂತೆ
5) ಡಾ: ಡಿ.ಕೆ. ಸುನೀತ - ಸ್ಥಾನಪನ್ನ ಬಡ್ತಿ ಸ್ಥಿರಿಕರಿಸುವುದು.
6) ಡಾ: ಕೆ.ಆರ್. ರವೀಂದ್ರ - ಸ್ಥಾನಪನ್ನ ಬಡ್ತಿ ಸ್ಥಿರಿಕರಿಸುವುದು.
7) ಡಾ: ಎಂ. ನಾರಾಯಣ ಸ್ವಾಮಿ - 04-11-2007 ರಿಂದ ಜಾರಿಗೆ ಬರುವಂತೆ
8) ಡಾ: ಮಧುಮತಿ ಆರ್. - ಸ್ಥಾನಪನ್ನ ಬಡ್ತಿ ಸ್ಥಿರಿಕರಿಸುವುದು.

**10. ಶಸ್ತ್ರ ಚಿಕಿತ್ಸಾ ವಿಭಾಗ:-**

1) ಡಾ: ಸುನಿಲ್ ಕುಮಾರ್ - ಸ್ಥಾನಪನ್ನ ಬಡ್ತಿ ಸ್ಥಿರಿಕರಿಸುವುದು.
2) ಡಾ: ಹೆಚ್.ಎನ್. ದಿನೇಶ್ - ಸ್ಥಾನಪನ್ನ ಬಡ್ತಿ ಸ್ಥಿರಿಕರಿಸುವುದು.
3) ಡಾ: ರವೀಕರ್ ಜಯರಾಜ್ - 15-09-2007 ರಿಂದ ಜಾರಿಗೆ ಬರುವಂತೆ
4) ಡಾ: ಸಿ.ಕೆ. ಶಶಿಕಲಾ - ಸ್ಥಾನಪನ್ನ ಬಡ್ತಿ ಸ್ಥಿರಿಕರಿಸುವುದು.
5) ಡಾ: ಜಿ. ರಾಜಶೇಖರ್ ಬಾಬು - 04-10-2007 ರಿಂದ ಜಾರಿಗೆ ಬರುವಂತೆ

**11. ಓ.ಬಿ.ಜಿ. ವಿಭಾಗ:-**

1) ಡಾ: ಟಿ.ಜಿ. ಜೋಷಿ - 09-09-2007 ರಿಂದ ಜಾರಿಗೆ ಬರುವಂತೆ
2) ಡಾ: ಕೆ. ಮೇದಾವಿ - 08-11-2007 ರಿಂದ ಜಾರಿಗೆ ಬರುವಂತೆ
3) ಡಾ: ಆರ್.ಸಿ. ಪ್ರಮೀಳ - ಸ್ಥಾನಪನ್ನ ಬಡ್ತಿ ಸ್ಥಿರಿಕರಿಸುವುದು.
4) ಡಾ: ಜಿ. ಸುನಂದಬಾಯಿ - ಸ್ಥಾನಪನ್ನ ಬಡ್ತಿ ಸ್ಥಿರಿಕರಿಸುವುದು.
5) ಡಾ: ಕೆ.ಎಂ. ಸುನಂದ - ಸ್ಥಾನಪನ್ನ ಬಡ್ತಿ ಸ್ಥಿರಿಕರಿಸುವುದು.

**12. ಕಿ.ವಿ. ಮೂಗು ಗಂಟಲು ವಿಭಾಗ:-**

1) ಡಾ: ಸತೀಶ್ ಬಾಬು - ಸ್ಥಾನಪನ್ನ ಬಡ್ತಿ ಸ್ಥಿರಿಕರಿಸುವುದು.
2) ಡಾ: ಸರೋಜಮ್ಮ - ಸ್ಥಾನಪನ್ನ ಬಡ್ತಿ ಸ್ಥಿರಿಕರಿಸುವುದು.
3) ಡಾ: ಎಸ್.ಬಿ. ಪ್ರಕಾಶ - ಸ್ಥಾನಪನ್ನ ಬಡ್ತಿ ಸ್ಥಿರಿಕರಿಸುವುದು.

**13. ಅಸ್ಥಿಚಿಕಿತ್ಸಾಶಾಸ್ತ್ರ ವಿಭಾಗ:-**

1) ಡಾ: ಎಸ್. ದೀಪಕ್ - ಸ್ಥಾನಪನ್ನ ಬಡ್ತಿ ಸ್ಥಿರೀಕರಿಸುವುದು.
2) ಡಾ: ಹೆಚ್.ವಿ. ಶೋಭಾ - ಸ್ಥಾನಪನ್ನ ಬಡ್ತಿ ಸ್ಥಿರೀಕರಿಸುವುದು.
3) ಡಾ: ಕೆ.ವಿ. ಪುಟ್ಟಕೆಂಪರಾಜು - ಸ್ಥಾನಪನ್ನ ಬಡ್ತಿ ಸ್ಥಿರೀಕರಿಸುವುದು.
4) ಡಾ: ಅಬ್ದುಲ್ ರೆವೂಫ್ - ಸ್ಥಾನಪನ್ನ ಬಡ್ತಿ ಸ್ಥಿರೀಕರಿಸುವುದು.
5) ಡಾ: ವಿ.ಜೆ. ಪುರುಷೋತ್ತಮ್ - ದಿ:04-08-2007 ರಿಂದ ಜಾರಿಗೆ ಬರುವಂತೆ

**14. ಸ್ಕಿನ್ ಅಂಡ್ ಎಸ್‌ಟಿಡಿ ವಿಭಾಗ:-**

1) ಡಾ: ಜಿ.ಎಸ್. ಆಶಾ - ದಿ:05-09-2006 ರಿಂದ ಜಾರಿಗೆ ಬರುವಂತೆ

**15. ನೇತ್ರಚಿಕಿತ್ಸಾ ಶಾಸ್ತ್ರ ವಿಭಾಗ:-**

1) ಡಾ: ಕೆಂಗಲ್ ಪ್ರಹ್ಲಾದ ರೆಡ್ಡಿ - ತಕ್ಷಣದಿಂದ ಜಾರಿಗೆ ಬರುವಂತೆ
2) ಡಾ: ಜಿ.ಎಸ್. ಗೋಪಿನಾಥ್ - ತಕ್ಷಣದಿಂದ ಜಾರಿಗೆ ಬರುವಂತೆ
3) ಡಾ: ದಮಯಂತ್ರಿ ಎಂ.ಸುರನಗಿ - ದಿ:21-10-2007 ರಿಂದ ಜಾರಿಗೆ ಬರುವಂತೆ
4) ಡಾ: ಎನ್. ಮಂಜುಳದೇವಿ - ದಿ:21-10-2007 ರಿಂದ ಜಾರಿಗೆ ಬರುವಂತೆ

**16. ಶಿಶುವೈದ್ಯಶಾಸ್ತ್ರ ವಿಭಾಗ:-**

1) ಡಾ: ಸರಳಾ ಸಭಾಪತಿ - ಸ್ಥಾನಪನ್ನ ಬಡ್ತಿ ಸ್ಥಿರೀಕರಿಸುವುದು.
2) ಡಾ: ಕೆ. ಮಲ್ಲೇಶ್ - ಸ್ಥಾನಪನ್ನ ಬಡ್ತಿ ಸ್ಥಿರೀಕರಿಸುವುದು.
3) ಡಾ: ಬಿ.ಹೆಚ್. ನಟೇಶ್ - ಸ್ಥಾನಪನ್ನ ಬಡ್ತಿ ಸ್ಥಿರೀಕರಿಸುವುದು.
4) ಡಾ: ಎಂ.ಆರ್. ಸವಿತ - ಸ್ಥಾನಪನ್ನ ಬಡ್ತಿ ಸ್ಥಿರೀಕರಿಸುವುದು.

**17. ಅರಳಿಕೆಶಾಸ್ತ್ರ ವಿಭಾಗ:-**

1) ಡಾ: ಟಿ.ಸಿ. ಶಿವಕುಮಾರ್ - ಸ್ಥಾನಪನ್ನ ಬಡ್ತಿ ಸ್ಥಿರೀಕರಿಸುವುದು.
2) ಡಾ: ಟಿ.ಕೆ. ಶಶಿಕಲಾ - ತಕ್ಷಣದಿಂದ ಜಾರಿಗೆ ಬರುವಂತೆ

**18. ರೇಡಿಯೋಡಯಾಗ್ನಿಸಿಸ್ ವಿಭಾಗ:-**

1) ಡಾ: ಹೆಚ್.ಸಿ. ರಾಮಣ್ಣ - ದಿ:06-12-2007 ರಿಂದ ಜಾರಿಗೆ ಬರುವಂತೆ
2) ಡಾ: ಎನ್.ಎಲ್. ರಾಜೇಂದ್ರ - ದಿ:19-11-2007 ರಿಂದ ಜಾರಿಗೆ ಬರುವಂತೆ

**19. ಮನೋರೋಗಶಾಸ್ತ್ರ ವಿಭಾಗ:-**

1) ಡಾ: ಎನ್.ಆರ್. ಪ್ರಶಾಂತ್ - ತಕ್ಷಣದಿಂದ ಜಾರಿಗೆ ಬರುವಂತೆ

**ಸರ್ಕಾರಿ ದಂತ ವೈದ್ಯಕೀಯ ಕಾಲೇಜು ಮತ್ತು ಸಂಶೋಧನಾ ಸಂಸ್ಥೆ, ಬೆಂಗಳೂರು**
**ಉಪನ್ಯಾಸಕ ಹುದ್ದೆಯಿಂದ ಸಹಾಯಕ ಪ್ರಾಧ್ಯಾಪಕರ ಹುದ್ದೆಗೆ:**

**20. ಪ್ರಾಸ್ಥೋಡಾಂಷಿಯಾ ವಿಭಾಗ:-**

1) ಡಾ: ಎಸ್.ಕೆ. ವಿಶ್ವನಾಥ್ - ತಕ್ಷಣದಿಂದ ಜಾರಿಗೆ ಬರುವಂತೆ

**21. ಅರ್ಥೋಡಾಂಷಿಯಾ ವಿಭಾಗ:-**

1) ಡಾ: ಹೆಚ್.ಎಲ್. ಉಮಾ - ಸ್ಥಾನಪನ್ನ ಬಡ್ತಿ ಸ್ಥಿರೀಕರಿಸುವುದು.

**22. ಪೆರಿಯೋಡಾಂಷಿಯಾ**

1) ಡಾ: ಎ. ಮಲ್ಲಿಕಾ - ತಕ್ಷಣದಿಂದ ಜಾರಿಗೆ ಬರುವಂತೆ

ಈ ಮೇಲಿನ ಎಲ್ಲಾ ಬೋಧಕ ಸಿಬ್ಬಂದಿಗೆ ಅವರುಗಳು ಬಡ್ತಿಗೆ ಅರ್ಹರಾಗುವ ದಿನಾಂಕಕ್ಕೆ ಬಡ್ತಿ ನೀಡಿ, ವೇತನ ನಿಗದಿಗೊಳಿಸಿ ಪ್ರತ್ಯೇಕವಾಗಿ ಅಧಿಸೂಚನೆಯನ್ನು ಹೊರಡಿಸಲು ಮಂಜೂರಾತಿ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಮಾಜ್ ಅಹಮದ್ ಷರೀಫ್**
ಸರ್ಕಾರದ ಜಂಟಿ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ, (ವೈದ್ಯಕೀಯ ಶಿಕ್ಷಣ).

ಪಿ.ಆರ್. 964

## ಒಳಾಡಳಿತ ಸಚಿವಾಲಯ

**ವಿಷಯ:** ಪರಶುರಾಂಪುರ ಪೊಲೀಸ್ ಠಾಣೆ ಗುನ್ನೆ ಸಂಖ್ಯೆ:176/2002 ಕಲಂ 302, 143, 147, 114 ರೆ.ವಿ.149 ಐ.ಪಿ.ಸಿ. ಪ್ರಕರಣದ ತನಿಖೆಯಲ್ಲಿನ ಲೋಪದೋಷಗಳ ಬಗ್ಗೆ ಸಂಬಂಧಿಸಿದ ಅಧಿಕಾರಿಗಳ ವಿರುದ್ಧ ಶಿಸ್ತು ಕ್ರಮ - ದೋಷಮುಕ್ತಗೊಳಿಸುವ ಬಗ್ಗೆ.

**ಓದಲಾಗಿದೆ:**
1. ಡಿಜಿ ಮತ್ತು ಐಜಿಪಿ, ಬೆಂಗಳೂರು ರವರ ಪತ್ರ ಸಂಖ್ಯೆ:5:11:2003-04 ದಿನಾಂಕ:10.02.2004.
2. ಸರ್ಕಾರದ ಆದೇಶ ಸಂಖ್ಯೆ:ಒಇ 102 ಪೊಸಿಪ 2004 ದಿನಾಂಕ: 23.04.2004.
3. ಸರ್ಕಾರದ ಆದೇಶ ಸಂಖ್ಯೆ:ಒಇ 102 ಪೊಸಿಪ 2004 ದಿನಾಂಕ: 15.01.2005.
4. ಡಿಜಿ ಮತ್ತು ಐಜಿಪಿ, ಬೆಂಗಳೂರು ರವರ ಪತ್ರ ಸಂಖ್ಯೆ:ಸಿಬಿ(5)11/2003-04, ದಿನಾಂಕ: 10.05.2007.

**ಪ್ರಸ್ತಾವನೆ:**

ಪರಶುರಾಂಪುರ ಪೊಲೀಸ್ ಠಾಣೆ ಗುನ್ನೆ ಸಂಖ್ಯೆ:176/2002 ಕಲಂ 302, 143, 147, 144 RW 149 IPC ಪ್ರಕರಣದ ತನಿಖೆಯಲ್ಲಿನ ಲೋಪದೋಷಗಳ ಬಗ್ಗೆ ಪೂರ್ವಭಾವಿ ವಿಚಾರಣೆಯಲ್ಲಿ ಮೇಲ್ನೋಟಕ್ಕೆ ಸಾಬೀತಾಗಿರುವುದರಿಂದ ಜಂಟಿ ಇಲಾಖಾ ವಿಚಾರಣೆಯನ್ನು ನಡೆಸಲು ಆದೇಶಿಸುವಂತೆ ಮೇಲೆ ಓದಲಾದ ಉಲ್ಲೇಖ (1)ರ ದಿನಾಂಕ: 10.02.2004ರ ಪತ್ರದಲ್ಲಿ ಡಿಜಿ ರವರು ಸರ್ಕಾರಕ್ಕೆ ಕೋರಿರುತ್ತಾರೆ. ಉಲ್ಲೇಖ (2)ರಲ್ಲಿ ಓದಲಾದ ಸರ್ಕಾರದ ಆದೇಶ ಸಂಖ್ಯೆ:ಒಇ 102 ಪೊಸಿಪ 2004 ದಿನಾಂಕ: 23.11.2004 ರಲ್ಲಿ ಕೆಎಸ್‌ಪಿ (ಡಿಪಿ) ನಿಯಮಗಳು, 1965ರ ನಿಯಮ 6 ಹಾಗೂ 8 ರನ್ವಯ ಜಂಟಿ ಇಲಾಖಾ ವಿಚಾರಣೆಯನ್ನು ನಡೆಸಲು ಡೆಪ್ಯೂಟಿ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್ (ತರಬೇತಿ) ಬೆಂಗಳೂರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಿ ಸರ್ಕಾರವು ಆದೇಶಿಸಿದೆ.

1. ಶ್ರೀ ಸಿ.ಎಸ್. ಜಂಗಮಶೆಟ್ಟಿ ಡಿವೈ.ಎಸ್.ಪಿ. ಹಾಲಿ ನಿವೃತ್ತ
2. ಶ್ರೀ ಬಿ. ಮಲ್ಲಿಕಾರ್ಜುನಪ್ಪ, ಡಿ.ಎಸ್.ಪಿ.
3. ಶ್ರೀ ಕೆ.ಜಿ. ಭೀಮಾನಾಯಕ್, ಪಿ.ಐ.
4. ಶ್ರೀ ರಮೇಶ್, ಪಿ.ಸ್.ಐ.
5. ಶ್ರೀ ಶಿರಾಜ್ ಅಹ್ಮದ್ ಎ.ಎಸ್.ಐ.

ಈ ಜಂಟಿ ಇಲಾಖಾ ವಿಚಾರಣೆಯನ್ನು ನಡೆಸಲು ಡಿಐಜಿಪಿ (ಆರ್&ಟಿ) ಬೆಂಗಳೂರು ಇವರನ್ನು ಸದರಿ ಸರ್ಕಾರದ ಆದೇಶದಲ್ಲಿ ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿತ್ತು. ತದನಂತರ ಮೇಲೆ ಓದಲಾದ (3)ರ ಸರ್ಕಾರದ ಆದೇಶ ಸಂಖ್ಯೆ:ಒಇ 102 ಪೊಸಿಪ 2004, ದಿನಾಂಕ:15.01.2005 ರಲ್ಲಿ ತಿದ್ದುಪಡಿ ಮಾಡಿ ಡಿಐಜಿಪಿ, ತರಬೇತಿ, ಬೆಂಗಳೂರು ಇವರನ್ನು ವಿಶೇಷ ಅಧಿಕಾರ ಹೊಂದಿದ ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿದೆ.

ಇಲಾಖಾ ವಿಚಾರಣಾಧಿಕಾರಿಗಳು ಹಾಗೂ ಪೊಲೀಸ್ ಉಪ ಮಹಾ ನಿರೀಕ್ಷಕರು, ತರಬೇತಿ, ಬೆಂಗಳೂರು ಇವರು ತಮ್ಮ ಪತ್ರ ದಿನಾಂಕ:10.04.2007 ರಲ್ಲಿ ಅಂತಿಮ ವರದಿಯನ್ನು ಸಲ್ಲಿಸಿರುತ್ತಾರೆ.

ಈ ಕೆಳಕಂಡ ಕರ್ತವ್ಯಲೋಪವನ್ನು ಎಸಗಿರುವ ಆರೋಪವಿರುತ್ತದೆ.

1) ಶ್ರೀ ಶಿರಾಜ್ ಅಹ್ಮದ್, ಎಎಸ್‌ಐ, ಪರಶುರಾಂಪುರ ಪಿಎಸ್ ಹಾಲಿ ಶ್ರೀರಾಂಪುರ ಪೊಲೀಸ್ ಠಾಣೆ ರವರು ಫಿರ್ಯಾದುದಾರರು ತನ್ನ ಮಗಳಾದ ಗೀತಮ್ಮಳನ್ನು ಸೀನಪ್ಪ ಮತ್ತು ಇತರರು ಸೀಮೆ ಎಣ್ಣೆ ಹಾಕಿ ಸುಟ್ಟು ಕೊಲೆ ಮಾಡಿರುತ್ತಾರೆಂದು ದೂರು ಮಾಡಿದರೂ ಕೊಲೆ ಪ್ರಕರಣ ದಾಖಲಿಸದೆ ಕೇವಲ ಅಸ್ವಾಭಾವಿಕ ಪ್ರಕರಣ ದಾಖಲಿಸಿಕೊಂಡು ಸರಿಯಾಗಿ ತನಿಖೆ ಮಾಡದೆ ಕರ್ತವ್ಯ ನಿರ್ಲಕ್ಷತೆ ತೋರಿರುತ್ತಾರೆ.
2) ಶ್ರೀ ರಮೇಶ್, ಪಿಎಸ್‌ಐ, ಪರಶುರಾಂಪುರ ಪಿಎಸ್ ಹಾಲಿ ತುರವನೂರು ಪಿಎಸ್ ರವರು ಸದರಿ ಯುಡಿಆರ್ ಪ್ರಕರಣದ ತನಿಖೆಯನ್ನು ವಹಿಸಿಕೊಂಡು ಫಿರ್ಯಾದುದಾರರನ್ನು ಭೇಟಿ ಮಾಡಿದಾಗ ಕೊಲೆಯಾಗಿರುವ ಬಗ್ಗೆ ದೂರು ನೀಡಿದರೂ, ಮೇಲಾಧಿಕಾರಿಗಳು ಸೂಚನೆ ನೀಡಿದರೂ ಕೊಲೆ ಪ್ರಕರಣ ದಾಖಲಿಸದೆ ತಮ್ಮ ಕರ್ತವ್ಯದಲ್ಲಿ ಘೋರ ದುರ್ನಡತೆ ತೋರಿರುತ್ತಾರೆ.
3) ಶ್ರೀ ಬಿ. ಮಲ್ಲಿಕಾರ್ಜುನಪ್ಪ, ಸಿಪಿಐ, ಚಳ್ಳಕೆರೆ ವೃತ್ತ ಹಾಲಿ ಡಿವೈ.ಎಸ್.ಪಿ. ರಾಮನಗರ ಉಪ ವಿಭಾಗ, ಬೆಂಗಳೂರು (ಗ್ರಾ) ಜಿಲ್ಲೆರವರು ಸದರಿ ಯುಡಿಆರ್ ಪ್ರಕರಣದ ತನಿಖೆಯ ಮೇಲುಸ್ತುವಾರಿ ಅಧಿಕಾರಿಯಾಗಿ ತನಿಖೆಯ ಮೇಲ್ವಿಚಾರಣೆಯನ್ನು ನಿರ್ವಹಿಸದೇ ಕೊಲೆ ಎಂದು ಫಿರ್ಯಾದಿ ನೀಡಿದರೂ ಸಹ ಕೊಲೆ ಪ್ರಕರಣವೆಂದು ದಾಖಲಿಸಿ ತನಿಖೆಯನ್ನು ನಡೆದೆ ಕರ್ತವ್ಯದಲ್ಲಿ ನಿರ್ಲಕ್ಷತೆ ತೋರಿರುತ್ತಾರೆ.
4) ಶ್ರೀ ಸಿ.ಎಸ್. ಜಂಗಮಶೆಟ್ಟಿ, ಡಿಎಸ್‌ಪಿ, ಚಳ್ಳಕೆರೆ ಉಪ ವಿಭಾಗ ಹಾಲಿ ಕೆ.ಪಿ.ಎ. ಮೈಸೂರು ರವರು ಪರಶುರಾಂಪುರ ಪೊಲೀಸ್ ಠಾಣೆಯ ಮೇಲ್ವಿಚಾರಕ ಅಧಿಕಾರಿಯಾಗಿ ಯುಡಿಆರ್ ಪ್ರಕರಣದ ತನಿಖೆಯ ಪ್ರಗತಿಯ ಬಗ್ಗೆ ಸರಿಯಾಗಿ ಪರಿಶೀಲಿಸದೆಯೇ ಫಿರ್ಯಾದಿ ಹನುಮಂತಪ್ಪ ಕೊಲೆ, ಎಂದು ದೂರು ಅರ್ಜಿ ಸಲ್ಲಿಸಿದರೂ ಈ ಬಗ್ಗೆ ವಿಚಾರಿಸದೆ ತಮ್ಮ ಮೇಲುಸ್ತುವಾರಿ ಕರ್ತವ್ಯದಲ್ಲಿ ನಿರ್ಲಕ್ಷತನ ತೋರಿರುತ್ತಾರೆ.
5) ಶ್ರೀ ಕೆ.ಜಿ. ಭೀಮಾನಯ್ಕ, ಸಿಪಿಐ, ಚಳ್ಳಕೆರೆ ಹಾಲಿ ಪಿಐ ಡಿ.ಸಿ.ಆರ್.ಇ. ತುಮಕೂರು ಇವರು ಸದರಿ ಪ್ರಕರಣದಲ್ಲಿ ಸರಿಯಾಗಿ ತನಿಖೆಯನ್ನು ನಡೆಸದೆ ಫಿರ್ಯಾದಿ ಹನುಮಂತಪ್ಪ ನೀಡಿದ ಫಿರ್ಯಾದಿಯನ್ನು ಉದಾಸೀನತೆಯಿಂದ ಪರಿಗಣಿಸಿರುತ್ತಾರೆ. ಅಲ್ಲದೆ ಸಂದರ್ಶನ ಪುಸ್ತಕದಲ್ಲಿ ಐಜಿಪಿ ರವರು ಆರೋಪಿಗಳ ಪತ್ತೆಯ ಬಗ್ಗೆ ತಿಳುವಳಿಕೆ ನೀಡಿದ್ದು, ಕೇಸ್ ಫೈಲ್ ಕೇಳಿದಾಗ ಪಿಎಸ್‌ಐ ರವರಲ್ಲಿರುವುದಾಗಿ ಉದಾಸೀನತೆಯ ಉತ್ತರ ನೀಡಿ ಕರ್ತವ್ಯದಲ್ಲಿ ನಿರ್ಲಕ್ಷತನ ತೋರಿರುತ್ತಾರೆ.

ವಿಚಾರಣಾಧಿಕಾರಿಗಳು ತಮ್ಮ ಅಂತಿಮ ವರದಿಯಲ್ಲಿ ಅಭಿಯೋಗಗಳ ಪರವಾಗಿ 5 ಪ್ರಮುಖ ಸಾಕ್ಷಿಗಳ ವಿಚಾರಣೆಯನ್ನು ನಡೆಸಿ ಈ ಸಾಕ್ಷಿಗಳನ್ನು ಪೊಲೀಸ್ ಸ್ನೇಹಿತರಿಂದ ಪಾಟಿ ಸವಾಲಿಗೆ ಒಳಪಡಿಸಿ ತದನಂತರ ಆಪಾದಿತ ಪೊಲೀಸ್ ಅಧಿಕಾರಿಗಳಿಂದ 1, 2, 3ನೇ ಮೌಖಿಕ ಹೇಳಿಕೆಗಳನ್ನು ಪಡೆದು ಈ ಆಪಾದಿತ ಪೊಲೀಸ್ ಅಧಿಕಾರಿಗಳ ವಿರುದ್ಧ ವ್ಯಕ್ತಪಡಿಸಿರುವ ಅಭಿಪ್ರಾಯದಲ್ಲಿ ಈ ಕೆಳಕಂಡ ಅಂಶಗಳು ತಿಳಿದು ಬರುತ್ತದೆ.

**1) ಆ.ಪೊ.ಅ-1 ಶ್ರೀ ಸಿ.ಎಸ್. ಜಂಗಮಶೆಟ್ಟಿ.** ಕಾರಣಗಳನ್ನು ವಿವರಿಸಿ ಆ.ಪೊ.ಅ-1 ರವರು ಸಿಪಿಐ ರವರುಗಳಿಗೆ ಪರಶುರಾಂಪುರ ಪೊಲೀಸ್ ಠಾಣೆ ಯುಡಿಆರ್ ಸಂಖ್ಯೆ:10/02ರ ಪ್ರಕರಣದಲ್ಲಿ ಸಲಹೆ-ಸೂಚನೆಗಳನ್ನು ನೀಡಿ ಸೂಕ್ತ ಮೇಲ್ವಿಚಾರಣೆಯನ್ನು ಮಾಡಿರುವುದಾಗಿ ವರದಿ ಮಾಡಿರುತ್ತಾರೆ.

**2) ಆ.ಪೊ.ಅ-2 ಶ್ರೀ ಮಲ್ಲಿಕಾರ್ಜುನಪ್ಪ.** ಈ ಹಿಂದೆ ಸಿಪಿಐ, ಡಿವೈ.ಎಸ್.ಪಿ. ರವರು ಎಸ್.ಪಿ. ರವರು ಫಿರ್ಯಾದಿಯನ್ನು ಇವರ ಬಳಿ ಕಳುಹಿಸಿ ಕೊಲೆ ಅಪರಾದ ಎಂತ ತನಿಖೆ ಮಾಡಲು ತಿಳಿಸಿದಾಗಲು ಸಹ ಕೊಲೆ ಪ್ರಕರಣ ದಾಖಲಿಸಿ ತನಿಖೆ ಕೈಗೊಳ್ಳದೆ ಇರುತ್ತಾರೆಂದು ಆರೋಪ ಇದೆ. ಆದರೆ ಇಲಾಖಾ ವಿಚಾರಣೆಯಲ್ಲಿ ಅಭಿಯೋಗಗಳ ಪರವಾಗಿ ಸಾಕ್ಷಿ-1 ರವರು ಸಿಪಿಐ ಮಲ್ಲಿಕಾರ್ಜುನಪ್ಪ ರವರನ್ನು ಭೇಟಿಯಾಗಿರುವುದಾಗಿ ತಿಳಿಸಿರುತ್ತಾರೆ. ಪಾಟಿ ಸವಾಲಿನಲ್ಲಿ 2-3 ಅಥವಾ ನಂತರ ಭೇಟಿಯಾಗಿರುವುದಾಗಿ ಸಿಪಿಐ ರವರು ಘಟನಾ ಸ್ಥಳಕ್ಕೆ ಹೋಗಿರುವ ವಿಷಯ ಮನೆಯಿಂದ ತಿಳಿದಿರುತ್ತದೆಂದು ಹೇಳಿಕೆ ನೀಡಿರುತ್ತಾರೆ.

**3) ಆ.ಪೊ.ಅ-3 ಶ್ರೀ ಕೆ.ಜಿ. ಭೀಮಾನಾಯ್ಕ.** ಸಿಪಿಐ ರವರು ಮೊಕದ್ದಮೆ ಸಂಖ್ಯೆ:176/02 ರಲ್ಲಿ ಸರಿಯಾದ ರೀತಿಯಲ್ಲಿ ತನಿಖೆಯನ್ನು ಮಾಡಿರುತ್ತಾರೆ.

**4) ಆ.ಪೊ.ಅ-4 ಶ್ರೀ ವಿ.ಎಲ್. ರಮೇಶ್.** ಪಿಎಸ್‌ಐ ರವರು ಮೇಲಾಧಿಕಾರಿಗಳಿಂದ ಬಂದ ಅರ್ಜಿ ಬಗ್ಗೆ ವಿಚಾರಣೆ ಮಾಡಿ ವರದಿಯನ್ನು ಎಸ್.ಪಿ. ಚಿತ್ರದುರ್ಗ ರವರಿಗೆ ರವಾನಿಸಿರುತ್ತಾರೆ. ಇದರಲ್ಲಿ ಅರ್ಜಿ ಸುಳ್ಳಾಗಿರುವುದರಿಂದ ವಿ.ಸಿ.ಹೆಚ್. ಭಾಗ 4 ರಲ್ಲಿ ಅಳವಡಿಸಲು ಅನುಮತಿಗಾಗಿ ರವಾನಿಸಿರುತ್ತಾರೆ.

**5) ಆ.ಪೊ.ಅ-5 ಶ್ರೀ ಸಿರಾಜ್ ಅಹ್ಮದ್.** ಎಎಸ್‌ಐ ರವರು ಫಿರ್ಯಾದು ಯಾವ ರೀತಿಯಾದ ದೂರು ನೀಡಿರುತ್ತಾರೆ ಅದರಂತೆ ಪ್ರಕರಣ ಸರಿಯಾಗಿ ದಾಖಲಿಸಿರುತ್ತಾರೆ.

ವಿಚಾರಣಾಧಿಕಾರಿಗಳು ವಿವರಿಸಿರುವ ಎಲ್ಲಾ ಆರೋಪಿತ ಪೊಲೀಸ್ ಅಧಿಕಾರಿಗಳ ವಿರುದ್ಧ ಮಾಡಿರುವ ಆರೋಪಗಳು ಸಾಬೀತಾಗಿರುವುದಿಲ್ಲವೆಂದು ಅಭಿಪ್ರಾಯವನ್ನು ವ್ಯಕ್ತಪಡಿಸಿರುತ್ತಾರೆ.

ಡಿಜಿ ಮತ್ತು ಐಜಿಪಿ ರವರು ಮೇಲೆ (4)ರಲ್ಲಿ ಓದಲಾದ ಪತ್ರದಲ್ಲಿ ವಿಚಾರಣಾಧಿಕಾರಿಯವರ ಅಂತಿಮ ವರದಿಯನ್ನು ಅನುಮೋದಿಸಿ ಸರ್ಕಾರದ ಅಂತಿಮ ಆದೇಶವನ್ನು ಕೋರಿದ್ದಾರೆ.

ಸರ್ಕಾರವು ವಿಷಯವನ್ನು ಕೂಲಂಕಷವಾಗಿ ಪರಿಶೀಲಿಸಿ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 102 ಪೊಸಿಪ 2004, ಬೆಂಗಳೂರು, ದಿನಾಂಕ: 18ನೇ ಮೇ 2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಈ ಕೆಳಕಂಡ ಪೊಲೀಸ್ ಅಧಿಕಾರಿಗಳನ್ನು ದೋಷಾರೋಪಗಳಿಂದ ದೋಷಮುಕ್ತಗೊಳಿಸಲಾಗಿದೆ.

1) ಶ್ರೀ ಸಿ.ಎಸ್. ಜಂಗಮಶೆಟ್ಟಿ ಡಿವೈ.ಎಸ್.ಪಿ. ಹಾಲಿ ನಿವೃತ್ತ
2) ಶ್ರೀ ಬಿ. ಮಲ್ಲಿಕಾರ್ಜುನಪ್ಪ, ಡಿ.ಎಸ್.ಪಿ.
3) ಶ್ರೀ ಕೆ.ಜಿ. ಭೀಮಾನಾಯಕ್, ಪಿ.ಐ.
4) ಶ್ರೀ ರಮೇಶ್, ಪಿ.ಎಸ್.ಐ.
5) ಶ್ರೀ ಶಿರಾಜ್ ಅಹ್ಮದ್, ಎ.ಎಸ್.ಐ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎ. ಕುಲಕರ್ಣಿ**

ಪಿ.ಆರ್. 935

ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ:** ಪ್ರಾಥಮಿಕ ಆರೋಗ್ಯ ಕೇಂದ್ರಗಳ ಸಲಹಾ ಸಮಿತಿಗಳ/ಆರೋಗ್ಯ ಸಲಹಾತ್ಮಕ ಸಮಿತಿಗಳನ್ನು ಪುನರ್ ರಚಿಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆ:ಆಕುಕ 201 ಸಿಜಿಇ 2005 ದಿ:25.05.05.

2) ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ನಿರ್ದೇಶನಾಲಯದ ಕಡತ ಸಂಖ್ಯೆ:N.H.R.M (ಎಂ ಮತ್ತು ಇ) 15/06-07.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಆದೇಶದಲ್ಲಿ ರಾಜ್ಯದ ಪ್ರಾಥಮಿಕ ಆರೋಗ್ಯ ಕೇಂದ್ರಗಳಿಗೆ ಸಲಹಾ ಸಮಿತಿಗಳು / ಪ್ರಾಥಮಿಕ ಆರೋಗ್ಯ ಘಟಕಗಳಿಗೆ ಆರೋಗ್ಯ ಸಲಹಾ ಸಮಿತಿಗಳನ್ನು ರಚಿಸಲಾಗಿದೆ. ಕೇಂದ್ರ ಸರ್ಕಾರದ ಎನ್.ಆರ್.ಹೆಚ್.ಎಂ. ಯೋಜನೆ ಅಡಿಯಲ್ಲಿ ರಾಜ್ಯದ ಪ್ರತಿ ಪ್ರಾಥಮಿಕ ಆರೋಗ್ಯ ಕೇಂದ್ರಗಳಿಗೆ ಸ್ಥಳೀಯ ಆರೋಗ್ಯ ಕಾರ್ಯಕ್ರಮಗಳಿಗಾಗಿ ವಾರ್ಷಿಕ ರೂ.25,000/- ಗಳನ್ನು ಅನ್‌ಟೈಡ್ ಅನುದಾನವನ್ನಾಗಿ ಮತ್ತು ರೂ.50,000/- ಗಳನ್ನು ವಾರ್ಷಿಕ ಅನುದಾನವನ್ನಾಗಿ ಪ್ರಾಥಮಿಕ ಆರೋಗ್ಯ ಕೇಂದ್ರಗಳ ಕಟ್ಟಡ ನಿರ್ವಹಣೆ ಹಾಗೂ ಆಸ್ಪತ್ರೆಯ ಇತರ ಮೂಲಭೂತ ಸೌಕರ್ಯಗಳ ಅಭಿವೃದ್ಧಿಗಾಗಿ ಕೊಡಲಾಗಿದೆ. ಈ ನಿಟ್ಟಿನಲ್ಲಿ ಕೇಂದ್ರ ಸರ್ಕಾರವು ಮಾರ್ಗಸೂಚಿಗಳನ್ನು ಹೊರಡಿಸಿರುತ್ತದೆ. ಸದರಿ ಮಾರ್ಗಸೂಚಿಗಳ ಪ್ರಕಾರ ಅನ್‌ಟೈಡ್ ನಿಧಿಯನ್ನು ಸಂಬಂಧಿಸಿದ ಆರೋಗ್ಯ ರಕ್ಷಾ ಸಮಿತಿಯ ಬ್ಯಾಂಕ್ ಖಾತೆಗೆ ಜಮಾ ಮಾಡಿ ಅಭಿವೃದ್ಧಿ ವೆಚ್ಚಗಳ ಉಸ್ತುವಾರಿಯನ್ನು ಸಮಿತಿಯು ನಿರ್ವಹಿಸಬೇಕಾಗಿರುತ್ತದೆ. ಪ್ರಾಥಮಿಕ ಆರೋಗ್ಯ ಕೇಂದ್ರಗಳ / ಘಟಕಗಳ ಆರೋಗ್ಯ ರಕ್ಷಾ ಸಮಿತಿಗಳ ಅಧ್ಯಕ್ಷರು / ಜನ ಪ್ರತಿನಿಧಿಗಳಾಗಿರುವುದು ಸೂಕ್ತವಾಗುವುದರಿಂದ ಪ್ರಾಥಮಿಕ ಆರೋಗ್ಯ ಕೇಂದ್ರವಿರುವ ಪ್ರದೇಶದ ಗ್ರಾಮ ಪಂಚಾಯಿತಿ ಅಧ್ಯಕ್ಷರನ್ನು ಆರೋಗ್ಯ ರಕ್ಷಾ ಸಮಿತಿಯ ಅಧ್ಯಕ್ಷರನ್ನಾಗಿ ನೇಮಿಸಬಹುದು. ಈ ಹಿನ್ನೆಲೆಯಲ್ಲಿ ಸದರಿ ಸಲಹಾ ಸಮಿತಿಗಳನ್ನು ಆರೋಗ್ಯ ರಕ್ಷಾ ಸಮಿತಿ ಎಂದು ಬದಲಾಯಿಸುವಂತೆ ಆಯುಕ್ತರು ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು ಇವರು ತಮ್ಮ ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಪತ್ರದಲ್ಲಿ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ. ಸದರಿ ಪ್ರಸ್ತಾವನೆಯ ಅಂಶಗಳನ್ನು ಕೂಲಂಕಷವಾಗಿ ಪರಿಶೀಲಿಸಿ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆಕುಕ 127 ಸಿಜಿಇ 2007, ಬೆಂಗಳೂರು, ದಿನಾಂಕ: 12ನೇ ಜುಲೈ 2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಸರ್ಕಾರದ ಆದೇಶ ಸಂಖ್ಯೆ:ಆಕುಕ 201 ಸಿಜಿಇ 2005 ದಿನಾಂಕ:25.05.05 ರಲ್ಲಿ ಪ್ರಾಥಮಿಕ ಆರೋಗ್ಯ ಕೇಂದ್ರಗಳಿಗೆ ಮತ್ತು ಪ್ರಾಥಮಿಕ ಘಟಕಗಳಿಗೆ ರಚಿಸಲಾಗಿದ್ದ ಆರೋಗ್ಯ ಸಲಹಾ ಸಮಿತಿಗಳನ್ನು ರದ್ದುಪಡಿಸಿ ರಾಜ್ಯದಲ್ಲಿನ ಎಲ್ಲಾ ಪ್ರಾಥಮಿಕ ಆರೋಗ್ಯ ಕೇಂದ್ರಗಳಿಗೆ (ರಾಜ್ಯದಲ್ಲಿನ 516 ಪ್ರಾಥಮಿಕ ಆರೋಗ್ಯ ಘಟಕಗಳನ್ನು ಪ್ರಾಥಮಿಕ ಆರೋಗ್ಯ ಕೇಂದ್ರಗಳನ್ನಾಗಿ ತಾತ್ವಿಕವಾಗಿ ಮೇಲ್ದರ್ಜೆಗೆ ಏರಿಸಿರುವುದು ಸೇರಿದಂತೆ) ಈ ಕೆಳಕಂಡಂತೆ ಪುನರ್‌ರಚಿಸಿ ಸದರಿ ಸಮಿತಿಯನ್ನು ಆರೋಗ್ಯ ರಕ್ಷಾ ಸಮಿತಿ ಎಂದು ಪರಿಷ್ಕರಿಸಿದೆ.

**ಅಧ್ಯಕ್ಷರು:**ಅಧ್ಯಕ್ಷರು, ಗ್ರಾಮ ಪಂಚಾಯಿತಿ (ಆರೋಗ್ಯ ಕೇಂದ್ರ / ಘಟಕ ಇರುವ ಸ್ಥಳದಲ್ಲಿರುವ ಗ್ರಾಮ ಪಂಚಾಯಿತಿ).

**ಸದಸ್ಯರು:** 1) ಕೇಂದ್ರ ಸ್ಥಾನದ ಮಹಿಳಾ ಆರೋಗ್ಯ ಸಂದರ್ಶಕರು.
2) ಐ.ಸಿ.ಡಿ.ಎಸ್. ಮೇಲ್ವಿಚಾರಕರು.
3) ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡಗಳ ಸ್ಥಳೀಯ ಪ್ರತಿನಿಧಿ.
4) ಮಹಿಳಾ ಪ್ರತಿನಿಧಿ.
5) ಸಾಮಾನ್ಯ ವರ್ಗದ ಪ್ರತಿನಿಧಿ.

**ವಿಶೇಷ ಆಹ್ವಾನಿತರು:**
1) ಸ್ಥಳೀಯ ಜಿಲ್ಲಾ ಪಂಚಾಯತ್ ಸದಸ್ಯರು.
2) ಸ್ಥಳೀಯ ತಾಲ್ಲೂಕು ಪಂಚಾಯತ್ ಸದಸ್ಯರು.
3) ಪ್ರಾಥಮಿಕ ಆರೋಗ್ಯ ಕೇಂದ್ರ / ಘಟಕದ ವ್ಯಾಪ್ತಿಗೆ ಒಳಪಡುವ ಎಲ್ಲಾ ಗ್ರಾಮ ಪಂಚಾಯತ್‌ಗಳ ಅಧ್ಯಕ್ಷರುಗಳು.

**ಸದಸ್ಯ ಕಾರ್ಯದರ್ಶಿ:** ಆರೋಗ್ಯಾಧಿಕಾರಿ, ಪ್ರಾಥಮಿಕ ಆರೋಗ್ಯ ಕೇಂದ್ರ /ಘಟಕ.

ಪ್ರಾಥಮಿಕ ಆರೋಗ್ಯ ಕೇಂದ್ರ/ಘಟಕಗಳು ಸಂಗ್ರಹಿಸುವ ಸೇವಾ ಶುಲ್ಕಗಳನ್ನು ಸಂಬಂಧಿಸಿದ ಬ್ಯಾಂಕ್ ಖಾತೆಗೆ ಜಮಾ ಮಾಡಿ ಅದನ್ನು ಆಸ್ಪತ್ರೆಯ ಅಭಿವೃದ್ಧಿಗಾಗಿ ಉಪಯೋಗಿಸಲು ಈ ಆರೋಗ್ಯ ರಕ್ಷಾ ಸಮಿತಿಗಳಿಗೆ ಅನುಮತಿ ನೀಡಿದೆ. ಈ ಆರೋಗ್ಯ ರಕ್ಷಾ ಸಮಿತಿಯ ಅಧ್ಯಕ್ಷರು (ಆರೋಗ್ಯ ಕೇಂದ್ರವಿರುವ ಗ್ರಾಮ ಪಂಚಾಯಿತಿ ಅಧ್ಯಕ್ಷರು) ಮತ್ತು ಸದಸ್ಯ ಕಾರ್ಯದರ್ಶಿ (ಸಂಬಂಧಿಸಿದ ಪ್ರಾಥಮಿಕ ಆರೋಗ್ಯ ಕೇಂದ್ರದ ವೈದ್ಯಾಧಿಕಾರಿ) ಇವರುಗಳ ಸಂಯುಕ್ತ ಬ್ಯಾಂಕ್ ಖಾತೆಯನ್ನು (Joint Account) ತೆರೆದು ಹಣದ ವ್ಯವಹಾರವನ್ನು ನಿರ್ವಹಿಸಬಹುದು.

ಸರ್ಕಾರದ ಆದೇಶ ಸಂಖ್ಯೆ: ಆಕುಕ 201 ಸಿಜಿಇ 2005, ದಿನಾಂಕ: 25-05-2005 ರಲ್ಲಿ ಆದೇಶಿಸಿರುವಂತೆ ಅಧಿಕಾರೇತರ ಸದಸ್ಯರ ಸಂಖ್ಯೆಯು ಪ್ರತಿ ಪ್ರಾಥಮಿಕ ಆರೋಗ್ಯ ಕೇಂದ್ರಕ್ಕೆ 5ರ ಪ್ರಮಾಣದಲ್ಲಿ 10,000 ಕ್ಕಿಂತ ಹೆಚ್ಚಾಗಿರುವುದರಿಂದ ಸದಸ್ಯರನ್ನು ನಾಮ ನಿರ್ದೇಶನ ಮಾಡುವ ಅಧಿಕಾರವನ್ನು ಪ್ರತ್ಯಾಯೋಜಿಸುವುದಕ್ಕೆ ಮಾನ್ಯ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವರಿಗೆ ಮತ್ತು ಪ್ರಾಥಮಿಕ ಆರೋಗ್ಯ ಕೇಂದ್ರಗಳಿಗೆ ಸುಬಂಧಿಸಿದಂತೆ ಸಂಬಂಧಪಟ್ಟ ಜಿಲ್ಲಾ ಸಚಿವರಿಗೆ ವಹಿಸಿರುವುದು ಮುಂದುವರಿಯುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಸ್.ಆರ್. ಶಂಕರ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

ಪಿ.ಆರ್. 1367

**ವಿಷಯ:** ಮೈಸೂರಿನ ವೈದ್ಯಕೀಯ ಕಾಲೇಜಿನ ಜೀವರಾಯನಕಟ್ಟೆ ಪ್ರದೇಶದ 10 ಸಾವಿರ ಪದರಡಿ ಜಂಟಿ ನಿವೇಶನನ್ನು ದೇವರಾಜ ಪೊಲೀಸ್ ಠಾಣೆಯ ಕಟ್ಟಡ ನಿರ್ಮಾಣಕ್ಕಾಗಿ - ಪರಿಷ್ಕೃತ ಆದೇಶ.

**ಓದಲಾಗಿದೆ:** 1) ದಿನಾಂಕ 19.11.2004, ಸಂಖ್ಯೆ: ಆಕುಕ 199 ಎಂಎಸ್‌ಎಫ್ 2004ರ ಸರ್ಕಾರಿ ಆದೇಶ.
2) ದಿನಾಂಕ 13.06.2005, ಸಂಖ್ಯೆ: ಆಕುಕ 199 ಎಂಎಸ್‌ಎಫ್ 2004ರ ಸರ್ಕಾರಿ ಆದೇಶ.
3) ದಿನಾಂಕ 15.07.2007ರ ಮೈಸೂರು ಮೆಡಿಕಲ್ ಕಾಲೇಜಿನ ಅಲುಮ್ನಿ ಅಸೋಸಿಯೇಷನ್, ಮೈಸೂರು ಇವರ ಮನವಿ.

**ಪ್ರಸ್ತಾವನೆ :**

1) ಮೇಲೆ ಕ್ರಮ ಸಂಖ್ಯೆ(1)ರಲ್ಲಿ ಓದಲಾದ ಆದೇಶದಲ್ಲಿ ಮೈಸೂರಿನ ದೇವರಾಜ ಮೊಹಲ್ಲಾ ಆಸ್ತಿ ಸಂಖ್ಯೆ:5 ವಿಸ್ತೀರ್ಣ 54941 ಚ.ಮೀ. ಉಳ್ಳ ಮೈಸೂರಿನ ಜಿ.ಕೆ. ಆಟದ ಮೈದಾನವನ್ನು ಮೈಸೂರು ವೈದ್ಯಕೀಯ ಕಾಲೇಜಿನ ಆಸ್ತಿಯೆಂದು ಮೈಸೂರು ಮಹಾನಗರ ಪಾಲಿಕೆಯಲ್ಲಿ ಹಾಗೂ ನಗರ ಭೂ ಮಾಪನ ಕಛೇರಿಯಲ್ಲಿ ದಾಖಲಿಸಲು ಆದೇಶಿಸಲಾಗಿದೆ. ಮೈಸೂರು ವೈದ್ಯಕೀಯ ಕಾಲೇಜಿನ ಹಳೆಯ ಆಟದ ಮೈದಾನದ ಸ್ವಲ್ಪ ಭಾಗದಲ್ಲಿ ಲೀಸ್ ಆಧಾರದಲ್ಲಿ ನಿರ್ಮಿಸಿರುವ ಪೆಟ್ರೋಲ್ ಬಂಕ್ ಮತ್ತು ಹಳೇ ವಸ್ತು ಪ್ರದರ್ಶನ ಕಟ್ಟಡದ ಹಿಂಭಾಗದಲ್ಲಿ ಇರುವ ರಾಯಲ್ ಎಜುಕೇಷನ್ ಸೊಸೈಟಿ ಕಟ್ಟಡಗಳನ್ನು 1974ರ Karnataka Public Premises (Erection of Unauthorised occupants) Act ರಡಿ ಸ್ವಂತವಾಗಿ ಹೊರಹಾಕಲು ಕ್ರಮ ತೆಗೆದುಕೊಳ್ಳಲು ಮೈಸೂರು ವೈದ್ಯಕೀಯ ಕಾಲೇಜಿನ ಪ್ರಾಂಶುಪಾಲರಿಗೆ ನಿರ್ದೇಶನ ನೀಡಿದೆ.

2) ಮೈಸೂರು ವೈದ್ಯಕೀಯ ಕಾಲೇಜಿನ ಜೀವರಾಯನಕಟ್ಟೆ ಮೈದಾನವನ್ನು ಮೈಸೂರು ವೈದ್ಯಕೀಯ ಕಾಲೇಜಿನ ಆಸ್ತಿಯೆಂದು ತೀರ್ಮಾನಿಸಿ, ಸರ್ಕಾರಿ ಆದೇಶವನ್ನು ಹೊರಡಿಸಲಾಗಿದೆ. ಸದರಿ ಆಸ್ತಿಯು ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಗೆ ಸೇರಿರುವುದರಿಂದ ಮೈಸೂರಿನ ಜೀವರಾಯನಕಟ್ಟೆ ಪ್ರದೇಶದಲ್ಲಿ ದೇವರಾಜ ಪೊಲೀಸ್ ಠಾಣೆ ನಿರ್ಮಿಸಲು ಖಾಲಿ ನಿವೇಶನವನ್ನು ಒದಗಿಸಲು ಮುಂದಿನ ಕ್ರಮ ಕೈಗೊಳ್ಳುವಂತೆ ನಗರಾಭಿವೃದ್ಧಿ ಇಲಾಖೆಯ ಕೋರಿಕೆಯನ್ನು ಕಂದಾಯ ಇಲಾಖೆಯ ಸಮಾಲೋಚನೆಯೊಂದಿಗೆ ಪರಿಶೀಲಿಸಿ, ವೈದ್ಯಕೀಯ ಶಿಕ್ಷಣ ಇಲಾಖೆಯ ಮೈಸೂರು ವೈದ್ಯಕೀಯ ಕಾಲೇಜಿನ ಜೀವರಾಯನಕಟ್ಟೆ ಪ್ರದೇಶದ ಆಗ್ನೇಯ ದಿಕ್ಕಿನಲ್ಲಿರುವ ಹತ್ತು ಸಾವಿರ ಚದರಡಿ ಖಾಲಿ ನಿವೇಶನವನ್ನು ದೇವರಾಜ ಪೊಲೀಸ್ ಠಾಣೆಯ ಕಟ್ಟಡ ನಿರ್ಮಾಣದ ಸಲುವಾಗಿ ಪೊಲೀಸ್ ಇಲಾಖೆಗೆ ಮೇಲೆ ಓದಲಾದ (2)ರ ಸರ್ಕಾರಿ ಆದೇಶದಲ್ಲಿ ವರ್ಗಾಯಿಸಲಾಗಿದೆ.

3) ಮೇಲೆ ಓದಲಾದ (3)ರ ಮನವಿಯಲ್ಲಿ ಮೈಸೂರು ವೈದ್ಯಕೀಯ ಮಹಾವಿದ್ಯಾಲಯದ ಅಲುಮ್ನಿ ಅಸೋಸಿಯೇಷನ್ ಇವರು ಮೈಸೂರು ವೈದ್ಯಕೀಯ ಕಾಲೇಜಿನ ಜೀವರಾಯನಕಟ್ಟೆ ಪ್ರದೇಶದ 10,000 ಚದರಡಿ ಖಾಲಿ ನಿವೇಶನವನ್ನು ದೇವರಾಜ ಪೊಲೀಸ್ ಠಾಣೆ ಕಟ್ಟಡ ನಿರ್ಮಾಣಕ್ಕಾಗಿ ನೀಡಿರುವ ಆದೇಶವನ್ನು ರದ್ದುಪಡಿಸುವಂತೆ ಕೋರಿರುತ್ತಾರೆ. ಸರ್ಕಾರವು, ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ, ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ:ಆಕುಕ 327 ಎಂಪಿಎಸ್ 2007, ಬೆಂಗಳೂರು, ದಿನಾಂಕ: 24ನೇ ಜುಲೈ 2007**

4) ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ದಿನಾಂಕ: 13.06.2005ರ ಸರ್ಕಾರಿ ಆದೇಶ ಸಂಖ್ಯೆ: ಆಕುಕ 199 ಎಂಎಸ್‌ಎಫ್ 2004 ರನ್ನು ಈ ಕೂಡಲೇ ಹಿಂದಕ್ಕೆ ಪಡೆಯಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ವಿ. ವೆಂಕಟೇಶ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ, (ವೈದ್ಯಕೀಯ ಶಿಕ್ಷಣ)

ಪಿ.ಆರ್. 1368

## ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

**ವಿಷಯ:** ಶ್ರೀ ಕೆ.ಪಿ. ಪರಮೇಶ್ವರಪ್ಪ, ಜಂಟಿ ನಿರ್ದೇಶಕರು, ಜಿಲ್ಲಾ ಕೈಗಾರಿಕಾ ಕೇಂದ್ರ, ಚಿಕ್ಕಮಗಳೂರು, ಇವರನ್ನು ಇಲಾಖಾ ವಿಚಾರಣೆಯಲ್ಲಿ ದೋಷಮುಕ್ತಗೊಳಿಸಿದ್ದರಿಂದ ಇವರ ಅಮಾನತ್ತಿನಲ್ಲಿದ್ದ ಅವಧಿಯನ್ನು ಸಕ್ರಮಗೊಳಿಸುವ ಬಗ್ಗೆ ಆದೇಶ.

**ಓದಲಾಗಿದೆ:**
1) ಸರ್ಕಾರದ ಆದೇಶ ಸಂಖ್ಯೆ:ವಾಕೈ 110 ಕೈಸೇವಿ 2004, ದಿ: 03.11.2004.
2) ಸರ್ಕಾರದ ಆದೇಶ ಸಂಖ್ಯೆ:ವಾಕೈ 110 ಕೈಸೇವಿ 2004, ದಿ: 01.12.2005.
3) ಸರ್ಕಾರದ ಆದೇಶ ಸಂಖ್ಯೆ:ವಾಕೈ 110 ಕೈಸೇವಿ 2004, ದಿ: 22.05.2007.
4) ಜಂಟಿ ನಿರ್ದೇಶಕರು, ಜಿಲ್ಲಾ ಕೈಗಾರಿಕಾ ಕೇಂದ್ರ, ಚಿಕ್ಕಮಗಳೂರು, ರವರ ಪತ್ರದ ಸಂಖ್ಯೆ: ಜಿಕೈಕೇ/ಚಿಮ/ಜಂನಿ/2007-08 ದಿ: 19.06.2007.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಸರ್ಕಾರದ ಆದೇಶದಲ್ಲಿ ಶ್ರೀ ಕೆ.ಪಿ. ಪರಮೇಶ್ವರಪ್ಪ, ಜಂಟಿ ನಿರ್ದೇಶಕರು, ಈ ಹಿಂದೆ ಮೈಸೂರು ಬಣ್ಣ ಮತ್ತು ವಾರ್ನಿಷ್ ನಿಯಮಿತ ಸಂಸ್ಥೆಯಲ್ಲಿ ವ್ಯವಸ್ಥಾಪಕ ನಿರ್ದೇಶಕರಾಗಿ ಕಾರ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ ಅವ್ಯವಹಾರ ನಡೆಸಿದ್ದ ಹಿನ್ನೆಲೆಯಲ್ಲಿ ಅಮಾನತ್ತುಗೊಳಿಸಲಾಗಿತ್ತು.

ಉಲ್ಲೇಖ (2)ರ ಸರ್ಕಾರಿ ಆದೇಶದಲ್ಲಿ ಸದರಿ ಅಧಿಕಾರಿಯವರ ಆರೋಪಗಳ ವಿರುದ್ಧ ಇಲಾಖಾ ವಿಚಾರಣೆ ಪೂರೈಸಿ ವಿಚಾರಣಾ ವರದಿಯನ್ನು ಸಲ್ಲಿಸುವಂತೆ ಆದೇಶಿಸಲಾಗಿತ್ತು.

ಉಲ್ಲೇಖ (3)ರ ಸರ್ಕಾರಿ ಆದೇಶದಲ್ಲಿ ಸದರಿ ಅಧಿಕಾರಿಯವರ ಆರೋಪಗಳ ವಿರುದ್ಧ ನಿಯಮಾವಳಿ ಅನುಸಾರ ಇಲಾಖಾ ವಿಚಾರಣೆಯನ್ನು ನಡೆಸಿ ಹಾಗೂ ಇಲಾಖಾ ವಿಚಾರಣೆಯಲ್ಲಿನ ಶಿಫಾರಸ್ಸುಗಳನ್ನು ಸರ್ಕಾರವು ಒಪ್ಪಿ ಸದರಿ ಅಧಿಕಾರಿಯವರನ್ನು ಆರೋಪದಿಂದ ದೋಷಮುಕ್ತರನ್ನಾಗಿ ಪರಿಗಣಿಸಿ ಆದೇಶ ಹೊರಡಿಸಿದೆ.

ಉಲ್ಲೇಖ (4)ರ ಪತ್ರದಲ್ಲಿ ಶ್ರೀ ಕೆ.ಪಿ. ಪರಮೇಶ್ವರಪ್ಪ ಜಂಟಿ ನಿರ್ದೇಶಕರು, ಇವರು ಇಲಾಖಾ ವಿಚಾರಣೆಯಲ್ಲಿ ಆರೋಪಗಳು ಸಾಬೀತಾಗಿಲ್ಲವಾದ ಕಾರಣ ಸರ್ಕಾರವು ದೋಷಮುಕ್ತರನ್ನಾಗಿ ಪರಿಗಣಿಸಿ ಆದೇಶ ಹೊರಡಿಸಿರುವುದರಿಂದ ದಿ: 05.07.2004 ರಿಂದ 24.11.2004 ರವರೆಗಿನ ಅಮಾನತ್ತಿನ ಅವಧಿಯನ್ನು ಕರ್ತವ್ಯದ ಅವಧಿಯೆಂದು ಪರಿಗಣಿಸಿ ಸೂಕ್ತ ಆದೇಶ ನೀಡುವಂತೆ ಕೋರಿರುತ್ತಾರೆ.

ಸರ್ಕಾರವು ಈ ಬಗ್ಗೆ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ವಾಕೈ 110 ಕೈಸೇವಿ 2004, ಬೆಂಗಳೂರು, ದಿನಾಂಕ: 23ನೇ ಜುಲೈ 2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಶ್ರೀ ಕೆ.ಪಿ. ಪರಮೇಶ್ವರಪ್ಪ, ಜಂಟಿ ನಿರ್ದೇಶಕರು, ಇವರು ಜಿಲ್ಲಾ ಕೈಗಾರಿಕಾ ಕೇಂದ್ರ, ಚಿಕ್ಕಮಗಳೂರು ಇವರನ್ನು ದಿ:05.07.2004 ರಿಂದ ದಿ:24.11.2004ರವರೆಗಿನ (ಎರಡೂ ದಿನಗಳು ಸೇರಿ) ಅಮಾನತ್ತಿನಲ್ಲಿಟ್ಟಿದ್ದ ಅವಧಿಯನ್ನು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 100ರ ಮೇರೆಗೆ ಕರ್ತವ್ಯದ ಅವಧಿಯೆಂದು ಪರಿಗಣಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಲ್.ಎಸ್. ವಾಸನ್**

ಪಿ.ಆರ್. 1369

ಸರ್ಕಾರದ ಅಧೀನ ಕಾರ್ಯದರ್ಶಿ,

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ, (ಸೇವೆಗಳು)

**ವಿಷಯ:** ಕನಕಪುರದಲ್ಲಿರುವ ಗಣಿ ಮತ್ತು ಭೂವಿಜ್ಞಾನ ಇಲಾಖೆಯ ಉಪನಿರ್ದೇಶಕರ ಕಛೇರಿಯನ್ನು ರಾಮನಗರಕ್ಕೆ ಸ್ಥಳಾಂತರಿಸುವ ಬಗ್ಗೆ.

**ಓದಲಾಗಿದೆ:**
1) ಮಾನ್ಯ ಮುಖ್ಯಮಂತ್ರಿಯವರ ಟಿಪ್ಪಣಿ ಸಂಖ್ಯೆ:ಸಿಎಂ.4318:ಎಸ್ಐಪಿ.2006 ದಿನಾಂಕ:25.10.2006.
2) ನಿರ್ದೇಶಕರು, ಗಣಿ ಮತ್ತು ಮತ್ತು ಭೂವಿಜ್ಞಾನ ಇಲಾಖೆ ಇವರ ಪತ್ರ ಸಂಖ್ಯೆ:ಗಭೂಇ:ಸಿಬ್ಬಂದಿ.ಅ(1):2006-07:2443 ದಿನಾಂಕ:02.12.2006.

**ಪ್ರಸ್ತಾವನೆ:**

ಗಣಿ ಮತ್ತು ಭೂವಿಜ್ಞಾನ ಇಲಾಖೆಯ ಉಪನಿರ್ದೇಶಕರ ಕಛೇರಿಯು ಕನಕಪುರ ತಾಲ್ಲೂಕಿನಲ್ಲಿ ಹಾಲಿ ಕಾರ್ಯನಿರ್ವಹಿಸುತ್ತಿದ್ದು, ಸದರಿ ಕಛೇರಿಯ ಕಾರ್ಯನಿರ್ವಹಣಾ ವ್ಯಾಪ್ತಿಯು ಕನಕಪುರ, ರಾಮನಗರ, ಚನ್ನಪಟ್ಟಣ, ಮಾಗಡಿ ತಾಲ್ಲೂಕುಗಳನ್ನೊಳಗೊಂಡಿದ್ದು, ಕನಕಪುರ ಮೇಲ್ಕಂಡ ತಾಲ್ಲೂಕುಗಳಿಂದ ಬಹಳ ದೂರವಿರುವುದಾಗಿಯೂ ಇದರಿಂದಾಗಿ ಸಾರ್ವಜನಿಕರಿಗೆ ತೊಂದರೆಯಾಗುತ್ತಿರುವ ಹಿನ್ನೆಲೆಯಲ್ಲಿ, ಸದರಿ ಕಛೇರಿಯನ್ನು ರಾಮನರಕ್ಕೆ ಸ್ಥಳಾಂತರಿಸಲು ಕೋರಿಕೆಗಳು ಬಂದಿರುವ ಹಿನ್ನೆಲೆಯಲ್ಲಿ, ಗಣಿ ಮತ್ತು ಭೂವಿಜ್ಞಾನ ಇಲಾಖೆಯ ಉಪನಿರ್ದೇಶಕರ ಕಛೇರಿಯನ್ನು ಕನಕಪುರದಿಂದ ರಾಮನಗರಕ್ಕೆ ವರ್ಗಾಯಿಸಲು ಕ್ರಮಸಂಖ್ಯೆ (1)ರಲ್ಲಿ ಓದಲಾದ ಟಿಪ್ಪಣಿಯಲ್ಲಿ ಮಾನ್ಯ ಮುಖ್ಯಮಂತ್ರಿಯವರು ಆದೇಶಿಸಿರುತ್ತಾರೆ. ಕ್ರಮಸಂಖ್ಯೆ(2)ರಲ್ಲಿನ ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ ಇವರ ವರದಿಯನುಸಾರ ಸದರಿ ಉಪನಿರ್ದೇಶಕರ ಕಛೇರಿಯ ವ್ಯಾಪ್ತಿಗೆ ಕನಕಪುರ, ರಾಮನಗರ ಮತ್ತು ಚನ್ನಪಟ್ಟಣ ತಾಲ್ಲೂಕುಗಳು ಮಾತ್ರ ಒಳಪಡುತ್ತಿವೆ ಎಂದು ಖಚಿತವಾಗಿದೆ. ಹಾಗೂ ಕನಕಪುರದಲ್ಲಿ ಗಣಿಗಾರಿಕೆ ಹೆಚ್ಚಾಗಿ ಇದ್ದರೂ, ರಾಮನಗರವು ಚನ್ನಪಟ್ಟಣ ಹಾಗೂ ಕನಕಪುರದಿಂದ ಸಮಾನ ದೂರದಲ್ಲಿರುವುದರಿಂದ ಗಣಿ ಮತ್ತು ಭೂವಿಜ್ಞಾನ ಇಲಾಖೆಯ ಉಪನಿರ್ದೇಶಕರ ಕಛೇರಿಯನ್ನು ಕನಕಪುರದಿಂದ ರಾಮನಗರಕ್ಕೆ, ಸದರಿ ಕಛೇರಿಗೆ ಮಂಜೂರಾಗಿರುವ ಅಧಿಕಾರಿ:ಸಿಬ್ಬಂದಿ ಹುದ್ದೆಗಳ ಸಮೇತ ರಾಮನಗರಕ್ಕೆ ಸ್ಥಳಾಂತರಿಸಿ, ಈ ಕೆಳಕಂಡ ಆದೇಶ ನೀಡಲಾಗಿದೆ.

**ಸರ್ಕಾರಕ್ಕೆ ಆದೇಶ ಸಂಖ್ಯೆ: ಸಿಐ.123:ಎಂಜಿಎಸ್.2006, ಬೆಂಗಳೂರು, ದಿನಾಂಕ: 24ನೇ ಜುಲೈ 2007**

ಪ್ರಸ್ತಾವನೆಯಲ್ಲಿ ವಿವರಿಸಿದಂತೆ, ಕನಕಪುರ ತಾಲ್ಲೂಕಿನಲ್ಲಿರುವ ಉಪನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ ಇವರ ಕಛೇರಿಯನ್ನು ಮಂಜೂರಾದ ಹುದ್ದೆಗಳು ಮತ್ತು ಅಧಿಕಾರಿ/ಸಿಬ್ಬಂದಿ ಸಮೇತವಾಗಿ ರಾಮನಗರಕ್ಕೆ ಸ್ಥಳಾಂತರಿಸಲು ಮಂಜೂರಾತಿ ನೀಡಲಾಗಿದೆ.

2. ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ:ಆಇ.906:ವೆಚ್ಚ-1:2007 ದಿನಾಂಕ::04.07.2007ರಲ್ಲಿ ನೀಡಿದ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಜಯಚಂದ್ರ**

ಪಿ.ಆರ್. 1370

ಸರ್ಕಾರದ ಅಧೀನ ಕಾರ್ಯದರ್ಶಿ (ಗಣಿ)
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ, (ಸೇವೆಗಳು).

## INFRASTRUCTURE DEVELOPMENT SECRETARIAT

**Sub:** Release of funds towards New Cost Sharing Railway Project Ramanagaram-Mysore Doubling Railways projects-reg.

**Read:** 1) Letter No.W.352 CN/BNC dated:08.05.07. of Chief Administrative Officer, SWR, Bangalore.

2) Ministry of Railways Letter No. 2006/W-I/SWR/CMKN dated. 5.6.07.

**Preamble:**

The Chief Administrative Officer, South Western Railway, Bangalore, in his letter read at (1) above, has informed that the work Doubling Track between Ramanagaram-Mysore Section has been included in the Railway Budget of 2007-08 at a total cost of Rs.343.18 crore including cost towards Electrification between Kengeri-Mysore Section and that the Government of Karnataka's share for doubling of track between Ramanagaram-Mysore Section (2/3$^{rd}$ GoK 1/3$^{rd}$ Railways) comes to Rs.228.79 crore.

2. The Railway outlay for the doubling of the above track for this year is Rs. 5.15 crore and proportionate Government of Karnataka's outlay comes to Rs. 10.3 crore. South Western Railways have also requested to deposit balance of GoK's share amount of Rs.18.11 crore towards Cost Sharing of doubling between kengeri-Ramanagaram section.

3. The Additional Member Works, Railway Board, New Delhi, in his letter read at (2) above, has stated that the total cost of the Project is to be borne by the State Government and the Railways and this would depend on the revised and completion estimates which would be sanctioned in the later stage. AS such he has requested the State Government to expedite the release of states share for the project so that the work would be expedited for early completion.

4. Government have examined the request of Railways and decided to release an amount of Rs.16.15 crores out of the available funds under the Head of Account "5465-01-190-3-08- (Plan) 059 Cost Sharing for New Projects-Investments (Plan) towards Cost Sharing Ramanagaram-Mysore railway line doubling project. Hence this order.

**Government Order No. IDD 68 NSW 2003, Bangalore, Dated: 24th July 2007**

After careful examination of the request of Railways, Government is pleased to release RS.16.15 crore (Rupees Sixteen Crore Fifteen Lakhs). only being 2/3$^{rd}$ share of the Government of Karnataka out of the available funds under the head of account "5465-01-190-3-08-(Plan) 059 Cost Sharing for New Projects - Investments (Plan)" only towards "Cost Sharing Ramanagaram-Mysore Railway Doubling Project and towards balance amount of cost sharing of doubling between Kengeri-Ramanagaram section.

2. The CFO and Company Secretary, iDeCK, is authorized to draw the amount on Payee's Receipt duly countersigned by the Under Secretary to Government, Infrastructure Development Department and iDeCK shall in-turn deposit the same with the Financial Advisor & Chief Accounts Officer (Cons), South Western Railway, Bangalore.

3. This order issues with the concurrence of the Finance Department, vide its U.O. Note No. FD 1144/Exp-I/07 dated 11.7.2007.

By Order and in the name of the Governor of Karnataka,

**N. MANJULA GEETHA**

P.R. 1371

Under Secretary to Government,
Infrastructure evelopment Department.

**Sub:** Sanction to release an amount of Rs.50,000.00 to KSIIDC being the expenditure incurred towards Techno-Economic-Feasibility Study for Gulbarga airport.

**Read:**
1) Govt. Order N. IDD 24 DIA 2000 dated 29.10.2004.
2) Letter No.AGM (BIAP)3774/2004-05 dated 6.12.2004 of KSIIDC.
3) Letter No.GM/1469/2005-06 dated 09.05.2005 of KSIIDC.
4) Letter No. DGM (IPD) 382/07-08 dated 10.05.07 of KSIIDC.

**Preamble:**

In Government Order read at Sl.No. (1) abve, KSIIDC was appointed as Nodal Agency for development of Gulbarga Airport and was also instructed to appoint a consultant for preparing a Techno-Economic-Feasibility Study Report for developing an airport at Gulbarga. In letter dated 06.12.2004 read to sl.no.(2) above, KSIIDC had appointed M/s Master Aerospace Consultants Pvt. Ltd., for preparing a Techno-Economic-Feasibility report for developing an airport at Gulbarga. In letter dated 09.05.05 read at Sl.No. (3) above, KSIIDC has submitted the Techno-Economic-Feasibility report. In letter dated 10.05.07 read at Sl.No.(4) above, KSIIDC had requested for reimbursement of Rs.50,000/- towards expenditure for preparing the feasibility report and Rs.50,000.00 as service charges to KSIIDC for the assignment.

Government have examined the same and hence this order.

**Government Order No. IDD 24 DIA 2000, Bangalore, Dated: 24th July 2007**

After careful examination of the above proposal Government have accorded sanction for release of Rs.50,000.00 (Rupees Fifty Thousand ) only towards the expenditure incurred by KSIIDC for preparing a Techno-Economic Feasiblity Study for development of an airport at Gulbarga.

2. This expenditure would be met out of the funds available under the head of account 5465-01-190-1-05 (Plan)-211-Investment-Development of Minor Airports.

3. The Managing Director, KSIIDC is authorized to draw the amount on a payee's receipt duly countersigned by the Under Secretary to Government. Infrastructure Development Department.

4. his order is issued in accordance with the concurrence of F.D. vide Endorsement No.FD 1121 Exp-I/07 dated 05-07-07.

By Order and in the name of the Governor of Karnataka,

**N. MANJULA GEETHA**

P.R. 1372

Under Secretary to Government,
Infrastructure Development Department.

**ಜಲ ಸಂಪನ್ಮೂಲ ಸಚಿವಾಲಯ**

**ವಿಷಯ:** ಹಾವೇರಿ ಜಿಲ್ಲೆ, ರಾಣಿಬೆನ್ನೂರು ನಗರದಲ್ಲಿರುವ ಸ.ನಂ.606ರ ಸಣ್ಣ ನೀರಾವರಿ ಇಲಾಖೆಯ ಕೆರೆಯನ್ನು ರಾಣಿಬೆನ್ನೂರು ನಗರಸಭೆಗೆ ಹಸ್ತಾಂತರಿಸುವ ಕುರಿತು.

**ಓದಲಾಗಿದೆ:**
1) ದಿನಾಂಕ 30.03.2007ರ ಪೌರಾಯುಕ್ತರು, ನಗರ ಸಭೆ, ರಾಣಿಬೆನ್ನೂರು ರವರ ಪತ್ರ ಸಂಖ್ಯೆ:ಕಾ/ N.K.U.S.E.P.U.D/CR4/2006-07/314
2) ದಿನಾಂಕ 08.05.2007ರ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ರವರ ಪತ್ರ ಸಂಖ್ಯೆ: ಮುಇಂ/ಸನೀ(ಉ)ವ/ಬಿಜೆಪಿ/ಎಇ-3/2006-07/4391.

**ಪ್ರಸ್ತಾವನೆ :**

ಉತ್ತರ ಕರ್ನಾಟಕ ಮೂಲಸೌಕರ್ಯ ಅಭಿವೃದ್ಧಿ ಯೋಜನೆಯಡಿಯಲ್ಲಿ ನಗರ ಕೆರೆಗಳ ಅಭಿವೃದ್ಧಿಗಾಗಿ 2.00 ಕೋಟಿ ರೂ.ಗಳ ಅನುದಾನ ಮಂಜೂರಾಗಿದ್ದು, ಈ ಮೊತ್ತ ಕೇವಲ ಕೆರೆಗಳ ಅಭಿವೃದ್ಧಿಗಾಗಿ ಮೀಸಲಾಗಿರುವುದಾಗಿ, ರಾಣಿಬೆನ್ನೂರು ನಗರ ಸಭೆ ವ್ಯಾಪ್ತಿಯ ಸಣ್ಣ ನೀರಾವರಿ ಇಲಾಖೆಯ ಕೆರೆಯಾದ ಹಿರೇಕೆರೆಯು ಒಂದು ಬೃಹತ್ ಕೆರೆಯಾಗಿದ್ದು, ಈ ಕೆರೆಯ ಅಭಿವೃದ್ಧಿಪಡಿಸುವುದರಿಂದ, ಅಂತರ್ಜಲ ಮಟ್ಟ ಹೆಚ್ಚಿಸುವುದಲ್ಲದೆ, ನೈಸರ್ಗಿಕವಾಗಿ ಭವಿಷ್ಯದಲ್ಲಿ ಹೆಚ್ಚು ಪ್ರಯೋಜನಗಳಿರುವುದರಿಂದ, ಮೂಲ ಸೌಕರ್ಯ ಅಭಿವೃದ್ಧಿ ಯೋಜನೆಯಡಿ ಈ ಕೆರೆಯನ್ನು ಅಭಿವೃದ್ಧಿಪಡಿಸುವ ಸಲುವಾಗಿ ರಾಣಿಬೆನ್ನೂರು ನಗರ ಸಭೆಗೆ ಹಸ್ತಾಂತರಿಸುವಂತೆ ಮೇಲೆ 2ರಲ್ಲಿ ಓದಲಾದ ದಿನಾಂಕ:30.3.2007ರ ಪತ್ರದಲ್ಲಿ ರಾಣಿಬೆನ್ನೂರು ನಗರ ಸಭೆಯ ಪೌರಾಯುಕ್ತರು ಕೋರಿರುತ್ತಾರೆ.

ಮೇಲೆ 1ರಲ್ಲಿ ಓದಲಾದ ದಿನಾಂಕ: 08.05.2007ರ ಸಣ್ಣ ನೀರಾವರಿ ಉತ್ತರ ವಲಯದ ಮುಖ್ಯ ಇಂಜಿನಿಯರ್‌ರವರ ಪತ್ರದಲ್ಲಿ ರಾಣಿಬೆನ್ನೂರು ನಗರ ವ್ಯಾಪ್ತಿಯಲ್ಲಿ ಬರುವ ಸಣ್ಣ ನೀರಾವರಿಯ ದೊಡ್ಡ ಕೆರೆಯನ್ನು ಅಭಿವೃದ್ಧಿಪಡಿಸುವ ಸಲುವಾಗಿ ರಾಣಿಬೆನ್ನೂರು ನಗರ ಸಭೆಗೆ ಹಸ್ತಾಂತರಿಸಲು ಸರ್ಕಾರದ ಅನುಮೋದನೆ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಸರ್ಕಾರದ ಮಟ್ಟದಲ್ಲಿ ಪರಿಶೀಲಿಸಿ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ:ಸನೀಇ 140 ಕೆಜಿದು 2007, ಬೆಂಗಳೂರು, ದಿನಾಂಕ: 27ನೇ ಜುಲೈ 2007**

ಮೇಲೆ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಸಣ್ಣ ನೀರಾವರಿ ಇಲಾಖೆಯ ವ್ಯಾಪ್ತಿಯಲ್ಲಿ ಬರುವ ಹಾವೇರಿ ಜಿಲ್ಲೆ, ರಾಣಿಬೆನ್ನೂರು ಸ.ನಂ.606ರಲ್ಲಿರುವ ರಾಣಿಬೆನ್ನೂರು ದೊಡ್ಡಕೆರೆಯನ್ನು ಈ ಕೆಳಕಂಡ ಷರತ್ತುಗಳಿಗೊಪಟ್ಟು ರಾಣಿಬೆನ್ನೂರು ನಗರ ಸಭೆಗೆ ಹಸ್ತಾಂತರಿಸಲು ಸರ್ಕಾರವು ಅನುಮೋದನೆ ನೀಡಿದೆ.

ಅ) ಕೆರೆಯ ನೀರಾವರಿ ಕ್ಷೇತ್ರದ ರೈತರಿಗೆ ನೀರಿನ ತೊಂದರೆಯಾಗದಂತೆ ಕೆರೆಯಲ್ಲಿ ನೀರು ಸಂಗ್ರಹವಾದಾಗ ನೀರನ್ನು ಒದಗಿಸುವುದು.

ಆ) ನೀರಿನ ಕರಾಕರಣೆಯು ಸಣ್ಣ ನೀರಾವರಿ ಇಲಾಖೆಯ ಅಧೀನದಲ್ಲಿರುವುದು.

ಇ) ಕೆರೆಯ ಅಭಿವೃದ್ಧಿಪಡಿಸುವಾಗ ಸಣ್ಣ ನೀರಾವರಿ ಇಲಾಖೆಯ ಸಲಹೆಯನ್ನು ಪಡೆಯುವುದು.

ಈ) ಕೆರೆಯ ಅಭಿವೃದ್ಧಿಪಡಿಸಿದ ನಂತರ ಸಣ್ಣ ನೀರಾವರಿ ಇಲಾಖೆಗೆ ಹಸ್ತಾಂತರಿಸುವುದು ಅಥವಾ ಎರಡೂ (ನಗರ ಸಭೆ ಮತ್ತು ಸಣ್ಣ ನೀರಾವರಿ) ಇಲಾಖೆಗೆ ಜಂಟಿ ಮೇಲ್ವಿಚಾರಣೆಗೊಳಪಡಿಸುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಸುಧಾಕರ ಶೆಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ).

ಪಿ.ಆರ್. 1417

## FINANCE SECRETARIAT

**Sub:** Procurement of Works - mandating the Standard Tender Document.

**Read:** 1) G.O.No. FD 06 PCL 2006, dated 21.3.2007.

2) Proceedings dated 1.6.2007 held under the Chairmanship of Principal Secretary, PWD regarding implementation of Standard Tender Documents.

**Preamble:**

As per the G.O. dated 21.3.2007 cited at (1) above, the Standard Tender Documents for Procurement of Works given in Annexures-I to VII to the G.O.No. FD 09 PCL 2004(I), dated 6.8.2005 have been made mandatory and every "Procurement Entity" under the Government (as defined in Karnataka Transparency in Public Procurements Act, 1999) shall make use of these Standard Tender Documents w.e.f. 1.4.2007.

In the meeting dated 1.6.2007 read at (2) above, detailed discussions were held regarding implementation of Standard Tender Documents and the following issues relating to difficulties that are likely to encounter in the implementation of the Standard Tender Documents were discussed.

- Minimum financial turnover
- Satisfactory completion of similar works
- Owning of machinery
- Furnishing of 10% FSD
- Payments to be made within 90 days to the Contractor
- Design and Drawings part of agreement
- Bid capacity etc.,

Further, the following decisions were also taken.

a) The Chief Engineer, C & B (South) shall arrange to convene a meeting under the Chairmanship of Secretary, PWD with the representatives of other Departments, who deal with tenders for procurement and the issues and suggestions are to be compiled and to be submitted to the Standing Committee.

b) The Standing Committee to review the same and to submit detailed report along with recommondations to the Finance Department for favour of further action in the matter.

c) The above process shall be completed with the time frame of three months.

d) The Finance Department to be requested to defer the implementation of G.O.No. FD 06 PCL 2006, Bangalore, dated 21.3.2007 regarding adoption of STD till further orders.

**Government Order No. FD 04 PCL 2006, Bangalore, Dated: 12th July 2007**

In the above circumstances stated above the implementation of the G.O.No.FD 06 PCL 2006, dated: 21.3.2007 mandating the Standard Tender Documents is deferred till 31.12.2007 by which time the Standing Committee set up shall submit its recommendation for modification of Standard Tender Documents for Procurement of Works.

By Order and in the name of the Governor of Karnataka,

**H.S. VENKATESHAIAH**

Deputy Secretary to Government,

Finance Department (Procurement Cell).

P.R. 1418

**Sub:** Introduction of Incentive Scheme for better enforcement of Karnataka Excise Act, 1965 and the rules made there under - treating the expenditure of the scheme as administrative expenditure by the KSBCL.

**Read:** 1) Government Order No. FD 47 EAA 2003 dated 11.09.2003.

2) Letter No.HR1-023 dated 02-07-2007 received from the Managing Director, KSBCL, Bangalore.

**Preamble:**

An incentive scheme has been introduced by the Government vide Government Order dated 11.09.2003 read at (1) above, for better enforcement of Karnataka Excise Act, 1965. The Scheme envisages payment of incentive, not exceeding ten percent of the value of the excisable goods seized. The Excise Commissioner is the sanctioning authority. It is stipulated under the scheme that, the incentive amount under this scheme shall be paid and separately accounted by the KSBCL and which shall be treated as payment of interest and repayment of principal in respect of loans advanced by the Governmment to the KSBCL, if no loan is outstanding, then the amounts disbursed shall be deemed to be an advance payment of privilege fee levied by the Government under Sec. 24 of the Excise Act, 2005.

This matter of mode of treating the incentive amount disbursed by the KSBCL has been examined by Government and decision has been taken that the KSBCL to meet the expenditure on the above said incentive scheme as part of its administrative expenditure. The Managing Director, KSBCL, in his letter dated 2.7.2007 read at (2) above, has agreed to this suggestion and requested the Government to issue necessary orders in this behalf.

This matter has ben examined by the Government and hence the following order;

**Government Order No. FD 30 EAA 2007, Bangalore, Dated: 31st July 2007**

Under the circumstances explained in the preamble and in partial modification of Government order No. FD 47 EAA 2003 dated 11.09.2003, Government hereby conveys its consent that, the Karnataka State Beverages Corporation Limited has to meet the expenditure on the above said incentive scheme as part of KSBCL administrative only with effect from 1st April 2006 onwards.

By Order and in the name of the Governor of Karnataka,

**B. KODANDARAMA GOWDA**

Under Secretary to Government,

Finance Department (Excise).

P.R. 1419

**ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ**

**ವಿಷಯ:** ಗುಡ್ಡನಾಡು ಪ್ರದೇಶದಲ್ಲಿ ರಚಿಸುವ ಸ್ವ ಸಹಾಯ ಸಂಘ (ಎಸ್‌ಹೆಚ್‌ಜಿ) ದಲ್ಲಿನ ಸದಸ್ಯರ ಸಂಖ್ಯೆಯ ಮಿತಿಯನ್ನು ಸಡಿಲಿಸುವ ಬಗ್ಗೆ.

**ಓದಲಾಗಿದೆ:** ದಿನಾಂಕ:18.11.2006ರಂದು ನಡೆದ ಎಂಟನೇ ಎಸ್‌ಜಿಎಸ್‌ವೈ ಎಸ್‌ಎಲ್ ಸಿಸಿ ಸಭಾ ನಡವಳಿ.

**ಪ್ರಸ್ತಾವನೆ:**

ಗುಡ್ಡನಾಡು ಪ್ರದೇಶಗಳಲ್ಲಿ ಜನಸಂಖ್ಯೆ ಕಡಿಮೆ ಹಾಗೂ ವಿರಳವಾಗಿರುವ ಕಾರಣ 10 ರಿಂದ 20 ಸದಸ್ಯರ ಸಂಖ್ಯೆಯುಳ್ಳ ಸ್ವ ಸಹಾಯ ಸಂಘ ರಚಿಸುವುದು ಬಹಳ ತ್ರಾಸದಾಯಕವಾಗಿರುವುದರಿಂದ ಈ ಮಿತಿಯನ್ನು ಸಡಿಲಿಸುವಂತೆ ಚಿಕ್ಕಮಗಳೂರು ಹಾಗೂ ಕೊಡಗು ಜಿಲ್ಲಾ ಪಂಚಾಯತಿಗಳು ಕೋರಿದ್ದವು. ಈ ಹಿನ್ನೆಲೆಯಲ್ಲಿ ದಿನಾಂಕ:18.11.2006 ರಂದು ನಡೆದ ಎಸ್‌ಜಿಎಸ್‌ವೈ ಎಸ್‌ಎಲ್‌ಸಿಸಿ ಸಭೆಯಲ್ಲಿ ವಿಷಯ:3) ಸುಧೀರ್ಘವಾಗಿ ಚರ್ಚಿಸಿದ ನಂತರ ಚಿಕ್ಕಮಗಳೂರು ಹಾಗೂ ಕೊಡಗು ಜಿಲ್ಲೆಗಳು ಗುಡ್ಡನಾಡು ಪ್ರದೇಶದ ಪ್ರವರ್ಗಕ್ಕೆ ಸೇರುವುದರಿಂದ ಸ್ವ ಸಹಾಯ ಸಂಘಗಳ ಸದಸ್ಯರ ಸಂಖ್ಯೆಯ ಮಿತಿಯನ್ನು 10 ರಿಂದ 20ರ ಬದಲು 5 ರಿಂದ 20ಕ್ಕೆ ಸಡಿಲಿಸಲು ತೀರ್ಮಾನಿಸಿದೆ. ಸದರಿ ತೀರ್ಮಾನದಂತೆ ಸ್ವ ಸಹಾಯ ಸಂಘದ ಸದಸ್ಯರ ಮಿತಿಯನ್ನು ಸಡಿಲಿಸಬೇಕಾಗಿರುವುದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ.40.ಎಸ್‌ಜೆವೈ.2007, ದಿನಾಂಕ: 25ನೇ ಜುಲೈ 2007**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಚಿಕ್ಕಮಗಳೂರು ಹಾಗೂ ಕೊಡಗು ಜಿಲ್ಲೆಗಳನ್ನು ಗುಡ್ಡನಾಡು ಪ್ರದೇಶವೆಂದು ಪರಿಗಣಿಸಿ ಸ್ವ ಸಹಾಯ ಸಂಘದ ಸದಸ್ಯರ ಸಂಖ್ಯೆಯ ಮಿತಿಯನ್ನು 10 ರಿಂದ 20ಕ್ಕೆ ಬದಲು 5 ರಿಂದ 20ಕ್ಕೆ ಸಡಿಲಿಸಿ ಮಂಜೂರಾತಿ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಜಿ.ವಿ. ಕೊಂಗವಾಡ್**

ಸರ್ಕಾರದ ಕಾರ್ಯದರ್ಶಿ,

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

ಪಿ.ಆರ್. 1420

**ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಸಚಿವಾಲಯ**

**ತಿದ್ದುಪಡಿ ಆದೇಶ**

**ಸಂ.ಮಮಇ 242 ಎಸ್‌ಜೆಡಿ 2006, ಬೆಂಗಳೂರು, ದಿನಾಂಕ: 28ನೇ ಜುಲೈ 2007**

ಸರ್ಕಾರದ ಆದೇಶ ಸಂಖ್ಯೆ ಮಮಇ 242 ಎಸ್‌ಜೆಡಿ 2006 ದಿನಾಂಕ: 25.7.2006ರ ಆದೇಶ ಭಾಗದಲ್ಲಿ ನಮೂದಿಸಿರುವ "ಪ್ರಸ್ತಾವನೆಗೆ ತಗಲುವ ವೆಚ್ಚವನ್ನು ಆಯಾ ಜಿಲ್ಲೆಯ ಸ್ವಯಂ ಸೇವಾ ಸಂಸ್ಥೆ/ರಾಜ್ಯ ಸರ್ಕಾರಿ ನಿವೃತ್ತ ಪಿಂಚಣಿದಾರರ ಅಥವಾ ಫೆಡರೇಷನ್ ಫಾರ್ ಸೀನಿಯರ್

ಸಿಟಿಜನ್ ಫೋರಂ ಆಫ್ ಕರ್ನಾಟಕ" ಎಂಬ ಬದಲಿಗೆ "ಪ್ರಸ್ತಾವನೆಗೆ ತಗಲುವ ವೆಚ್ಚವನ್ನು ರಾಜ್ಯ ಸರ್ಕಾರಿ ನಿವೃತ್ತ ಪಿಂಚಣಿದಾರರ ಅಥವಾ ಫೆಡರೇಷನ್ ಫಾರ್ ಸೀನಿಯರ್ ಸಿಟಿಜನ್ ಫೋರಂ ಆಫ್ ಕರ್ನಾಟಕ" ಎಂದು ಓದಿಕೊಳ್ಳಲು ಸೂಚಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎಂ. ಚಂದ್ರಮ್ಮ**

ಪಿ.ಆರ್. 1421

ಸರ್ಕಾರದ ಅಧೀನ ಕಾರ್ಯದರ್ಶಿ,

ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ.

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ:** ಶ್ರೀ ಲಕ್ಷ್ಮೀನಾರಾಯಣ ರೈ, ಗ್ರಾಮ ಪಂಚಾಯಿತಿ ಕಾರ್ಯದರ್ಶಿ, ವೇಣೂರು, ಬೆಳ್ತಂಗಡಿ ತಾಲ್ಲೂಕು, ಇವರು ಲಂಚದ ಪ್ರಕರಣದಲ್ಲಿ ಲೋಕಾಯುಕ್ತ ಬಲೆಗೆ ಸಿಕ್ಕಿಬಿದ್ದಿರುವ ಸಂಬಂಧ ಶಿಸ್ತು ಕ್ರಮ.

**ಓದಲಾಗಿದೆ:**

1. ನಿಬಂಧಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು, ಇವರ ಪತ್ರ ಸಂಖ್ಯೆ:ದೂರು-ಉಪಲೋಕ್-ಎಂ.ವೈ.ಎಸ್.15/ 99-2000/ಪಿಓಟು ಎಆರ್‌ಇ-1, ದಿನಾಂಕ: 18.1.2000.
2. ಸರ್ಕಾರಿ ಆದೇಶ ಸಂಖ್ಯೆ: ಗ್ರಾಅಪ 29 ಕೆ.ಎಸ್.ಎಸ್. 2000, ದಿನಾಂಕ: 4.2.2000.
3. ಕರ್ನಾಟಕ ಉಪಲೋಕಾಯುಕ್ತ, ಬೆಂಗಳೂರು, ಇವರ ಅ.ಸ.ಪ. ಸಂಖ್ಯೆ: ಎಲ್.ಓ.ಕೆ.-ಎ ಆರ್ ಇ -3/ ಇಎನ್‌ಕ್ಯೂ-30/ 02-03, ದಿನಾಂಕ: 16.7.2007.

**ಪ್ರಸ್ತಾವನೆ:**

ಶ್ರೀ ಲಕ್ಷ್ಮೀನಾರಾಯಣ ರೈ, ಗ್ರಾಮ ಪಂಚಾಯಿತಿ ಕಾರ್ಯದರ್ಶಿ, ವೇಣೂರು, ಬೆಳ್ತಂಗಡಿ ತಾಲ್ಲೂಕು, ದಕ್ಷಿಣ ಕನ್ನಡ ಜಿಲ್ಲೆ, ಇವರು ವ್ಯಾಪಾರದ ಪರವಾನಿಗೆ ನವೀಕರಣದ ಸಂಬಂಧ ಶ್ರೀ ಸುದೀಶ್ ಹೆಗ್ಡೆ ಎಂಬುವರಿಂದ ರೂ.250 ಲಂಚ ಪಡೆಯುತ್ತಿದ್ದಾಗ, ದಿನಾಂಕ:17.3.1998 ರಂದು ಲೋಕಾಯುಕ್ತರ ಬಲೆಗೆ ಸಿಕ್ಕಿಬಿದ್ದಿದ್ದು ಉಪಲೋಕಾಯುಕ್ತ, ಕರ್ನಾಟಕ, ಬೆಂಗಳೂರು, ಇವರು ಸ್ವಯಂ ಪ್ರೇರಿತ ವಿಚಾರಣೆ ನಡೆಸಿ, ಈ ನೌಕರರ ವಿರುದ್ಧ ಕಠಿಣ ಶಿಕ್ಷೆ ವಿಧಿಸುವ ಕುರಿತಂತೆ ಎಸಗಿರುವ ದುರ್ನಡತೆ ಮೇಲೆ ಶಿಸ್ತಿನ ಕ್ರಮ ಜರುಗಿಸಲು ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಪತ್ರದಲ್ಲಿ ಕೋರಿದ್ದು, ಅವರ ಪ್ರಸ್ತಾವನೆಯನ್ನು ಪರಿಶೀಲಿಸಿ, ಈ ನೌಕರರ ವಿರುದ್ಧ ಇಲಾಖಾ ವಿಚಾರಣೆ ನಡೆಸಲು ಉಪ ಲೋಕಾಯುಕ್ತ, ಕರ್ನಾಟಕ, ಬೆಂಗಳೂರು, ಇವರಿಗೆ ವಹಿಸಲು ಸರ್ಕಾರವು ತೀರ್ಮಾನಿಸಿ ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಸರ್ಕಾರಿ ಆದೇಶದಲ್ಲಿ ಲೋಕಾಯುಕ್ತಕ್ಕೆ ವಹಿಸಲಾಗಿತ್ತು. ಲೋಕಾಯುಕ್ತವು ವಿಚಾರಣೆ ನಡೆಸಿ, ಆರೋಪಿತ ನೌಕರರ ವಿರುದ್ಧ ಮಾಡಲಾದ ಲಂಚದ ಪ್ರಕರಣದ ಆರೋಪ ಸಾಬೀತಾಗದೆ ಇರುವುದರಿಂದ, ಆರೋಪಿತ ನೌಕರರನ್ನು ಆರೋಪದಿಂದ ಮುಕ್ತಗೊಳಿಸಲು ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ಪತ್ರದಲ್ಲಿ ಕರ್ನಾಟಕ ಲೋಕಾಯುಕ್ತವು ಶಿಫಾರಸ್ಸು ಮಾಡಿರುತ್ತಾರೆ.

ಕರ್ನಾಟಕ ಲೋಕಾಯುಕ್ತ ಇವರ ಶಿಫಾರಸ್ಸನ್ನು ಸರ್ಕಾರವು ಒಪ್ಪಿಕೊಂಡು ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಗ್ರಾಅಪ 459 ಗ್ರಾಪಂಅ 2007, ಬೆಂಗಳೂರು, ದಿನಾಂಕ:1ನೇ ಆಗಸ್ಟ್ 2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಶ್ರೀ ಲಕ್ಷ್ಮೀನಾರಾಯಣ.ರೈ.ಗ್ರಾಮ ಪಂಚಾಯಿತಿ ಕಾರ್ಯದರ್ಶಿ, ವೇಣೂರು, ಬೆಳ್ತಂಗಡಿ ತಾಲ್ಲೂಕು, ಇವರ ವಿರುದ್ಧದ ಲಂಚದ ಪ್ರಕರಣದ ಆರೋಪವು ಸಾಬೀತಾಗದೆ ಇರುವುದರಿಂದ ಪ್ರಕರಣವನ್ನು ಕೈಬಿಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಎಸ್. ಶಾಮಸುಂದರ**

ಪಿ.ಆರ್. 1422

ಸರ್ಕಾರದ ಅಧೀನ ಕಾರ್ಯದರ್ಶಿ,

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

## ಇಂಧನ ಸಚಿವಾಲಯ

**ವಿಷಯ:** ಮೆ:: ಮಂಗಳ ಕಮಲ ಪವರ್ ಪ್ರೈವೇಟ್ ಲಿಮಿಟೆಡ್ (ಎಂ.ಕೆ. ಪವರ್ ಪ್ರೈವೇಟ್ ಲಿಮಿಟೆಡ್) ಕಂಪನಿಯ 1.5 ಮೆಗಾ ವ್ಯಾಟ್ ಸಾಮರ್ಥ್ಯದ ಚಾರ್ಮಾಡಿ ಕಿರು ಜಲ ವಿದ್ಯುತ್ ಯೋಜನೆಯನ್ನು 2.00 ಮೆಗಾವ್ಯಾಟ್ ಸಾಮರ್ಥ್ಯಕ್ಕೆ ಹೆಚ್ಚಿಸುವ ಬಗ್ಗೆ.

**ಓದಲಾಗಿದೆ:**

1. ಸರ್ಕಾರಿ ಆದೇಶ ಸಂಖ್ಯೆ: ಇಎನ್ 324 ಎನ್‌ಸಿಇ 2006 ದಿನಾಂಕ: 16.10.2006.
2. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/06/ಚಾರ್ಮಾಡಿ/2007/1551 ದಿನಾಂಕ: 6.7.2007.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಆದೇಶದಲ್ಲಿ ಮೆ:: ಎಂ.ಕೆ. ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ದಕ್ಷಿಣ ಕನ್ನಡ ಜಿಲ್ಲೆಯ ಬೆಳ್ತಂಗಡಿ ತಾಲ್ಲೂಕಿನ ಚಾರ್ಮಡಿ ಗ್ರಾಮದ ಬಳಿ ಚಾರ್ಮಡಿ ನದಿಗೆ ಅಡ್ಡಲಾಗಿ 1.5 ಮೆಗಾ ವ್ಯಾಟ್ ಸಾಮರ್ಥ್ಯದ ಚಾರ್ಮಡಿ ಕಿರು ಜಾಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿದೆ.

ಮೇಲೆ ಓದಲಾದ (2)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರು ಯೋಜನಾ ಸ್ಥಳದಲ್ಲಿ ಇನ್ನೂ ಹೆಚ್ಚಿನ ವಿದ್ಯುತ್ ಉತ್ಪಾದಿಸಬಹುದೆಂದು ಅಭಿವೃದ್ಧಿದಾರರು ತಿಳಿಸಿರುವುದರ ಹಿನ್ನೆಲೆಯಲ್ಲಿ ಚಾರ್ಮಡಿ ಕಿರು ಜಲ ವಿದ್ಯುತ್ ಯೋಜನೆಯ ಸಾಮರ್ಥ್ಯವನ್ನು 1.5 ಮೆಗಾ ವ್ಯಾಟ್ ನಿಂದ 2.00 ಮೆಗಾ ವ್ಯಾಟ್ ಸಾಮರ್ಥ್ಯಕ್ಕೆ ಹೆಚ್ಚಿಸಿ ಅನುಷ್ಠಾನ ಮಾಡಲು ಶಿಫಾರಸ್ಸು ಮಾಡಿರುತ್ತಾರೆ.

ಮೇಲಿನ ಶಿಫಾರಸ್ಸನ್ನು ಸರ್ಕಾರದ ಮಟ್ಟದಲ್ಲಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ:-

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 261 ಎನ್‌ಸಿಇ 2007, ಬೆಂಗಳೂರು, ದಿನಾಂಕ: 1ನೇ ಆಗಸ್ಟ್ 2007**

ಸರ್ಕಾರವು ಮೆ:: ಮಂಗಳ ಕಮಲ ಪವರ್ ಪ್ರೈವೇಟ್ ಲಿಮಿಟೆಡ್ (ಎಂ.ಕೆ. ಪವರ್ ಪ್ರೈವೇಟ್ ಲಿಮಿಟೆಡ್) ಕಂಪನಿಗೆ ದಕ್ಷಿಣ ಕನ್ನಡ ಜಿಲ್ಲೆಯ ಬೆಳ್ತಂಗಡಿ ತಾಲ್ಲೂಕಿನ ಚಾರ್ಮಡಿ ಗ್ರಾಮದ ಬಳಿ ಚಾರ್ಮಡಿ ನದಿಗೆ ಅಡ್ಡಲಾಗಿ ಈಗಾಗಲೇ ಹಂಚಿಕೆ ಮಾಡಲಾಗಿರುವ 1.5 ಮೆಗಾ ವ್ಯಾಟ್

ನಿಯಮಾವಳಿಗಳ 1957ರ ನಿಯಮ 8 (iii) ರನ್ವಯ ಸಂಚಿತ ಪರಿಣಾಮವಾಗಿ ಜಾರಿಗೆ ಬರುವಂತೆ ಮೂರು ವಾರ್ಷಿಕ ವೇತನ ಬಡ್ತಿಗಳನ್ನು ತಡೆ ಹಿಡಿಯಲು ಸರ್ಕಾವು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಎಸ್. ಶಾಮಸುಂದರ**

ಪಿ.ಆರ್. 1456

ಸರ್ಕಾರದ ಅಧೀನ ಕಾರ್ಯದರ್ಶಿ,

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

**ವಿಷಯ:** ಶ್ರೀ ಧನರಾಜ್.ಎಸ್. ಮೂಲಗೆ, ಹಿಂದಿನ ಗ್ರಾ.ಪಂ. ಕಾರ್ಯದರ್ಶಿ, ಸಾಲಕುಣಿ ಗ್ರಾಮ ಪಂಚಾಯಿತಿ ಶಿರಸಿ ತಾಲ್ಲೂಕು ಇವರನ್ನು ಸರ್ಕಾರಿ ಸೇವೆಯಿಂದ ವಜಾ ಮಾಡುವ ದಂಡನೆಯನ್ನು ವಿಧಿಸುವ ಬಗ್ಗೆ.

**ಓದಲಾಗಿದೆ:**
1) ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿ.ಪಂ. ಉತ್ತರ ಕನ್ನಡ ಇವರ ಪತ್ರ ಸಂಖ್ಯೆ.ಜಿಪಂಆ/ಗ್ರಾಪಂ/116/05-06 ದಿನಾಂಕ: 24.8.2005, 17.12.2005 ಮತ್ತು 25.5.2007.
2) ಸರ್ಕಾರದ ಅಧಿಕೃತ ಜ್ಞಾಪನ ಸಂಖ್ಯೆ. ಗ್ರಾಅಪ 487 ಜಡ್ ಪಿಟಿ 93 ದಿನಾಂಕ 9.7.1994.

**ಪ್ರಸ್ತಾವನೆ :**

ಶ್ರೀ ಧನರಾಜ್.ಎಸ್. ಮೂಲಗೆ, ಹಿಂದಿನ ಗ್ರಾ.ಪಂ. ಕಾರ್ಯದರ್ಶಿ, ಸಾಲಕುಣಿ ಗ್ರಾಮ ಪಂಚಾಯಿತಿ ಶಿರಸಿ ತಾಲ್ಲೂಕು, ಉತ್ತರಕನ್ನಡ ಜಿಲ್ಲೆ ಇವರು ಉಲ್ಲೇಖ (2)ರ ಸರ್ಕಾರದ ಆದೇಶದಲ್ಲಿ ಕಾರ್ಯದರ್ಶಿ-ಕಮ್-ದ್ವಿ.ದ.ಸ. ರಾಗಿ ದಿನಾಂಕ: 9.7.94 ರಂದು ನೇಮಕಾತಿ ಹೊಂದಿರುತ್ತಾರೆ. ಇವರು ಶಿರಸಿ ತಾಲ್ಲೂಕು, ಸಾಲಕುಣಿ ಗ್ರಾಮ ಪಂಚಾಯಿತಿಯಲ್ಲಿ ಕಾರ್ಯದರ್ಶಿಯಾಗಿ ಕರ್ತವ್ಯ ನಿರ್ವಹಿಸುತ್ತಿದ್ದು, ದಿನಾಂಕ: 17.3.1999 ರಿಂದ ಅನಧಿಕೃತ ಗೈರು ಹಾಜರಾಗಿರುತ್ತಾರೆ. ಈ ಪ್ರಕರಣದಲ್ಲಿ ಇವರಿಗೆ ಅನೇಕ ಪತ್ರ ಹಾಗೂ ನೋಟೀಸ್ ನೀಡಿದ್ದರೂ ಸಹ ಕೆಲಸಕ್ಕೆ ಪುನಃ ಹಾಜರಾಗಿರುವುದಿಲ್ಲ.

ಈ ಪ್ರಕರಣದಲ್ಲಿ ಇವರ ವಿರುದ್ಧದ ಆಪಾದನೆಗಳ ಬಗ್ಗೆ 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳ 11ನೇ ನಿಯಮದ (2ನೇ ವಿಷಯದಡಿ) ಸದರಿ ನೌಕರರ ವಿರುದ್ಧದ ಆರೋಪಗಳ ಬಗ್ಗೆ ಸದರಿ ನಿಯಮಗಳ 11ನೇ ನಿಯಮಕ್ಕನುಸಾರವಾಗಿ ವಿಚಾರಣೆಯನ್ನು ನಡೆಸಿದ್ದು ಇವರ ಮೇಲೆ ಮಾಡಲಾದ ಈ ಕೆಳಕಂಡ 2 ಆರೋಪಗಳು ವಿಚಾರಣೆಯಿಂದ ರುಜುವಾತುಪಟ್ಟಿರುತ್ತದೆ.

1) ಶ್ರೀ ಡಿ.ಎಸ್. ಮೂಲಗೆ, ಕಾರ್ಯದರ್ಶಿ, ಗ್ರಾಮ ಪಂಚಾಯಿತಿ, ಸಾಲಕುಣಿ ಆದ ಇವರು ದಿನಾಂಕ:25.08.94 ರಿಂದ ಕರ್ತವ್ಯ ನಿರ್ವಹಿಸಿ ನಂತರ ದಿನಾಂಕ: 17.3.1999 ರಿಂದ ಸರ್ಕಾರಿ ಕೆಲಸಕ್ಕೆ ಗೈರು ಹಾಜರಾಗಿರುವುದು.
2) ಯಾವುದೇ ರಜಾ ಅರ್ಜಿಯನ್ನು ಸಲ್ಲಿಸದೆ ದಿನಾಂಕ: 17.3.1999 ರಿಂದ ಗಾರು ಹಾಜರಾಗಿ ಕರ್ತವ್ಯ ನಿರ್ವಹಿಸುತ್ತಿದ್ದ ಗ್ರಾಮ ಪಂಚಾಯಿತಿಯ ಚಾರ್ಜನ್ನು ಯಾರಿಗೂ ಹಸ್ತಾಂತರಿಸದೆ ಇರುವುದು.

ಆಪಾದಿತ ನೌಕರರು ಸರ್ಕಾರಿ ಕೆಲಸಕ್ಕೆ ದಿನಾಂಕ: 17.3.1999 ರಿಂದ ಈವರೆವಿಗೂ ಗೈರು ಹಾಜರಾಗದೆ ಇದ್ದುದರಿಂದ ಹಾಗೂ ಇವರ ವಿರುದ್ಧ ಮಾಡಲಾದ ಎರಡೂ ಆರೋಪಗಳು ವಿಚಾರಣೆಯಿಂದ ಸಾಬೀತಾಗಿರುವುದರಿಂದ ಹಿನ್ನೆಲೆಯಲ್ಲಿ ಇವರನ್ನು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳ 1957 ರ ನಿಯಮ 8 (viii) ರಡಿ ಇವರನ್ನು ಕೆಲಸದಿಂದ ವಜಾಗೊಳಿಸುವ ಮಹಾದಂಡನೆಯನ್ನು ವಿಧಿಸುವಂತೆ ಮೇಲೆ ಓದಲಾದ (1)ರ ಪತ್ರದಲ್ಲಿ ಶಿಫಾರಸ್ಸು ಮಾಡಿ ಸರ್ಕಾರದ ಆದೇಶರನ್ನು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಸರ್ಕಾರದ ಹಂತದಲ್ಲಿ ಪರಿಶೀಲಿಸಿ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 45 ಗ್ರಾಪಂಕಾ 2006, ಬೆಂಗಳೂರು, ದಿನಾಂಕ: 6ನೇ ಆಗಸ್ಟ್ 2007**

ಶ್ರೀ ಧನರಾಜ್.ಎಸ್.ಮೂಲಗೆ, ಹಿಂದಿನ ಗ್ರಾಮ ಪಂಚಾಯಿತಿ ಕಾರ್ಯದರ್ಶಿ, ಸಾಲ್ಕಣಿ ಗ್ರಾಮ ಪಂಚಾಯಿತಿ, ಶಿರಸಿ ತಾಲ್ಲೂಕು, ಉತ್ತರಕನ್ನಡ ಜಿಲ್ಲೆ ಇವರು ದಿನಾಂಕ:17.3.1999 ರಿಂದ ಈವರೆವಿಗೂ ಅನಧಿಕೃತ ಗೈರು ಹಾಜರಿಗೆ ಸಂಬಂಧಿಸಿದಂತೆ ವಿಚಾರಣೆಯಿಂದ ಸಾಬೀತಾಗಿರುವ ಕಾರಣ ಇವರನ್ನು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳ 1957ರ ನಿಯಮ 8(viii) ರನ್ವಯ ಈ ಕೂಡಲೇ ಜಾರಿಗೆ ಬರುವಂತೆ ಇವರನ್ನು ಕೆಲಸದಿಂದ ವಜಾಗೊಳಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಎಸ್. ಶಾಮಸುಂದರ**

ಪಿ.ಆರ್. 1457

ಸರ್ಕಾರದ ಅಧೀನ ಕಾರ್ಯದರ್ಶಿ,

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

## ಒಳಾಡಳಿತ ಸಚಿವಾಲಯ

**ವಿಷಯ:** ಕಾರಾಗೃಹಗಳ ಮಹಾ ನಿರೀಕ್ಷಕರ ಹುದ್ದೆಯನ್ನು ಪೊಲೀಸ್ ಮಹಾ ನಿರ್ದೇಶಕರು ಮತ್ತು ಕರ್ನಾಟಕ ಕಾರಾಗೃಹಗಳ ಮಹಾ ನಿರೀಕ್ಷಕರ ಹುದ್ದೆ ಎಂದು ಮುಂದುವರೆಸುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರದ ಆದೇಶದ ಸಂಖ್ಯೆ:ಡಿಪಿಎಆರ್ 113 ಎಸ್‌ಪಿಎಸ್ 2006, ಬೆಂಗಳೂರು, ದಿನಾಂಕ: 20.06.2006.
2) ಸರ್ಕಾರದ ಆದೇಶದ ಸಂಖ್ಯೆ:ಹೆಚ್‌ಡಿ 61 ಪಿಆರ್‌ಇ 2006, ಬೆಂಗಳೂರು, ದಿನಾಂಕ: 17.02.2007.
3) ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು ಮತ್ತು ಕರ್ನಾಟಕ ಕಾರಾಗೃಹಗಳ ಮಹಾ ನಿರೀಕ್ಷಕರವರ ಪತ್ರ ಸಂಖ್ಯೆ:ಕ.ಸಿ/ನಗದು/ಸಿಆರ್-25/2006, ದಿನಾಂಕ: 26.5.06.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಸರ್ಕಾರದ ಆದೇಶದ ಮೇರೆಗೆ ಶ್ರೀ ಎಸ್.ಟಿ. ರಮೇಶ್, ಐ.ಪಿ.ಎಸ್., ಕೆ.ಎನ್.76 ಇವರನ್ನು ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು ಮತ್ತು ಕಾರಾಗೃಹಗಳ ಮಹಾ ನಿರೀಕ್ಷಕರ ಹುದ್ದೆಗೆ ನೇಮಕ ಮಾಡಿದ್ದು, ಸದರಿ ಆದೇಶದಂತೆ ಶ್ರೀಯುತರು ದಿನಾಂಕ: 30.06.2006ರ ಅಪರಾಹ್ನ ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು ಮತ್ತು ಕರ್ನಾಟಕದ ಕಾರಾಗೃಹಗಳ ಮಹಾ ನಿರೀಕ್ಷಕರ ಹುದ್ದೆಯ ಪ್ರಭಾರವನ್ನು ವಹಿಸಿಕೊಂಡಿರುತ್ತಾರೆ. ದಿನಾಂಕ: 01.07.2007 ರಿಂದ ಒಂದು ವರ್ಷದವರೆಗೆ ಅಥವಾ ಶ್ರೀಯುತರು ಸದರಿ ಹುದ್ದೆಯಲ್ಲಿ

ಮುಂದುವರೆಯುವವರೆಗೆ ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಕಾರಾಗೃಹಗಳ ಮಹಾ ನಿರೀಕ್ಷಕರ ಹುದ್ದೆಯನ್ನು ವೇತನ ಶ್ರೇಣಿ ರೂ. 22400-525-24000 ರಲ್ಲಿ ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು ಮತ್ತು ಕರ್ನಾಟಕದ ಕಾರಾಗೃಹಗಳ ಮಹಾ ನಿರೀಕ್ಷಕರ ಹುದ್ದೆ ಎಂದು ಮುಂದುವರೆಸಿ ಓದಲಾದ ಕ್ರಮ ಸಂಖ್ಯೆ (2)ರ ಆದೇಶವನ್ನು ಹೊರಡಿಸಲಾಗಿದೆ.

ಸದರಿಯವರು ದಿನಾಂಕ: 30.06.2006 ರಿಂದ ಇಲ್ಲಿಯವರೆಗೆ ಕರ್ತವ್ಯ ನಿರ್ವಹಿಸುತ್ತಿರುವುದರಿಂದ ಹಾಗೂ ಈ ಹುದ್ದೆಯ ಕಾಲಾವಧಿಯು ದಿನಾಂಕ:30.06.2007 ರವರೆಗೆ ಇರುವುದರಿಂದ, ದಿನಾಂಕ:01.07.2007 ರಿಂದ ಒಂದು ವರ್ಷದವರೆಗೆ ಅಥವಾ ಸದರಿ ಅಧಿಕಾರಿಗಳು ಮುಂದುವರೆಯುವವರೆಗೆ ಕಾರಾಗೃಹಗಳ ಮಹಾ ನಿರೀಕ್ಷಕರ ಹುದ್ದೆಯನ್ನು ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು ಮತ್ತು ಕರ್ನಾಟಕದ ಕಾರಾಗೃಹಗಳ ಮಹಾ ನಿರೀಕ್ಷಕರ ಹುದ್ದೆ ಎಂದು ಮುಂದುವರೆಸಿ ಸರ್ಕಾರದ ಆದೇಶವನ್ನು ಹೊರಡಿಸುವಂತೆ ಓದಲಾದ ಕ್ರಮ ಸಂಖ್ಯೆ (3)ರ ಪತ್ರದಲ್ಲಿ ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು ಮತ್ತು ಕರ್ನಾಟಕದ ಕಾರಾಗೃಹಗಳ ಮಹಾ ನಿರೀಕ್ಷಕರು ಸರ್ಕಾರವನ್ನು ಕೋರಿರುತ್ತಾರೆ.

ಈ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಸರ್ಕಾರದ ಆದೇಶವನ್ನು ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಹೆಚ್‌ಡಿ 46 ಪಿಆರ್‌ಇ 2007, ಬೆಂಗಳೂರು, ದಿನಾಂಕ: 31ನೇ ಜುಲೈ 2007**

ಮೇಲೆ ವಿವರಿಸಿರುವ ಪ್ರಸ್ತಾವನೆಯ ಹಿನ್ನೆಲೆಯಲ್ಲಿ ಕಾರಾಗೃಹಗಳ ಮಹಾ ನಿರೀಕ್ಷಕರ ಹುದ್ದೆಯನ್ನು ವೇತನ ಶ್ರೇಣಿ ರೂ.22400-525-24000 ರಲ್ಲಿ ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು ಮತ್ತು ಕರ್ನಾಟಕದ ಕಾರಾಗೃಹಗಳ ಮಹಾ ನಿರೀಕ್ಷಕರ ಹುದ್ದೆ ಎಂದು ದಿನಾಂಕ: 01.07.2007 ರಿಂದ ಪುನಃ ಒಂದು ವರ್ಷದವರೆಗೆ ಮುಂದುವರೆಸಿದೆ.

ಈ ಆದೇಶವನ್ನು ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-1)ಯ ಟಿಪ್ಪಣಿ ಸಂಖ್ಯೆ:ಸಿಆಸುಇ 119 ಎಸ್‌ಪಿಎಸ್ 2007, ದಿನಾಂಕ: 17.07.2007 ರಲ್ಲಿ ನೀಡಿದ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಟಿ. ಕೃಷ್ಣಮೂರ್ತಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

ಪಿ.ಆರ್. 1458

## ಯೋಜನೆ ಹಾಗೂ ಸಾಂಖ್ಯಿಕ ಸಚಿವಾಲಯ

### ತಿದ್ದುಪಡಿ

**ಸಂಖ್ಯೆ:ಪಿಡಿ 56 ಪಿಎಂಎಂ 2007, ಬೆಂಗಳೂರು, ದಿನಾಂಕ: 26ನೇ ಜುಲೈ 2007**

ಸರ್ಕಾರದ ಆದೇಶ ಸಂಖ್ಯೆ:ಪಿಡಿ 56 ಪಿಎಂಎಂ 2007, ದಿನಾಂಕ:24.07.2007ರ ಆದೇಶದ ಭಾಗದಲ್ಲಿ ಸರ್ಕಾರದ ಜಂಟಿ ಕಾರ್ಯದರ್ಶಿ ಎಂಬುದರ ಬದಲಾಗಿ "ಜಂಟಿ ಕಾರ್ಯದರ್ಶಿ, ರಾಜ್ಯ ಯೋಜನಾ ಮಂಡಳಿ" ಎಂದು ಓದಿಕೊಳ್ಳುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಬಿ.ಎಸ್. ಶಿವಸ್ವಾಮಿ**
ಸರ್ಕಾರದ ಅಧೀನ ಕಾರ್ಯದರ್ಶಿ-1&2 (ಪ್ರ),
ಯೋಜನೆ ಹಾಗೂ ಸಾಂಖ್ಯಿಕ ಇಲಾಖೆ.

ಪಿ.ಆರ್. 1462

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಡಾ: ಎಂ.ಕೆ. ನಾಗರಾಜ್, ಐ.ಪಿ.ಎಸ್, ಐಜಿಪಿ, ರಾಜ್ಯ ಗುಪ್ತವಾರ್ತೆ ಬೆಂಗಳೂರುರವರಿಗೆ ವಿಶೇಷ ದುರ್ಬಲತೆ ರಜೆ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ:** ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾನಿರೀಕ್ಷಕರು, ಬೆಂಗಳೂರು ಇವರ ಪತ್ರ ಸಂಖ್ಯೆ.ಸಿಬಿ 3/69/2006 ದಿ: 04.12.2006 ಮತ್ತು 21.05.2007.

**ಪ್ರಸ್ತಾವನೆ:**

ಡಾ: ಎಂ.ಕೆ. ನಾಗರಾಜ್, ಐಪಿಎಸ್, ಐಜಿಪಿ, ರಾಜ್ಯ ಗುಪ್ತವಾರ್ತೆ, ಬೆಂಗಳೂರುರವರು ದಿ:14.10.2006ರಂದು ಭಾರತದ ಘನತೆವೆತ್ತ ರಾಷ್ಟ್ರಪತಿಯವರು ಆದಿಚುಂಚನಗಿರಿ ಸುಕ್ಷೇತ್ರದಲ್ಲಿ ಏರ್ಪಡಿಸಿದ್ದ ಕಾರ್ಯಕ್ರಮಗಳ ಪೂರ್ವಸಿದ್ದತೆಗಳ ಪರಿವೀಕ್ಷಣೆಗೆಂದು ಅಥಿತಿಗೃಹಕ್ಕೆ ತೆರಳುತ್ತಿರುವಾಗ ಆಕಸ್ಮಿಕವಾಗಿ ಕಾಲುಜಾರಿ ಬಿದ್ದು ಹಿಫ್ ಮೂಳೆಯು ಮುರಿದ ಕಾರಣ ಬೆಂಗಳೂರಿನ ಸಾಗರ್ ಅಪೊಲೊ ಆಸ್ಪತ್ರೆಯಲ್ಲಿ ಮರುದಿನ ಶಸ್ತ್ರ ಚಿಕಿತ್ಸೆ ಪಡೆದು ವೈದ್ಯರ ಸಲಹೆ ಪ್ರಕಾರ ಖಾಯಿಲೆ ವಿಶ್ರಾಂತಿಗಾಗಿ ದಿ:15.10.2006 ರಿಂದ 21.01.2007ರ ವರೆಗೆ ವಿಶ್ರಾಂತಿಯನ್ನು ಪಡೆದು ದಿ: 22.01.2007 ರಂದು ಕರ್ತವ್ಯಕ್ಕೆ ಹಾಜರಾಗಿರುತ್ತಾರೆಂದು ಮೇಲ್ಕಂಡ ರಜೆಯ ಅವಧಿಗೆ ವೈದ್ಯಕೀಯ ಪ್ರಮಾಣ ಪತ್ರಗಳನ್ನು ಒದಗಿಸಿದ್ದು, ಸದರಿ ವೈದ್ಯಕೀಯ ಪ್ರಮಾಣ ಪತ್ರಗಳನ್ನು ಪರಿಶೀಲಿಸಿ ಅಧ್ಯಕ್ಷರು, ವೈದ್ಯಕೀಯ ಪರೀಕ್ಷಾ ಮಂಡಳಿ, ಕೆ.ಸಿ. ಜನರಲ್ ಆಸ್ಪತ್ರೆ, ಬೆಂಗಳೂರು ಇವರು ದಿ:15.10.2006 ರಿಂದ 21.1.2007ರ ವರೆಗಿನ ರಜೆಗೆ ವೈದ್ಯಕೀಯ ಪ್ರಮಾಣ ಪತ್ರವನ್ನು ನೀಡಿರುತ್ತಾರೆಂದೂ ಡಾ: ಎಂ.ಕೆ. ನಾಗರಾಜ್, ಐಜಿಪಿ, ಗುಪ್ತವಾರ್ತೆ, ಬೆಂಗಳೂರುರವರಿಗೆ ವಿಶೇಷ ದುರ್ಬಲತೆ ರಜೆಯನ್ನು ಮಂಜೂರು ಮಾಡಲು ಮೇಲೆ ಓದಲಾದ ಪತ್ರದಲ್ಲಿ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾನಿರೀಕ್ಷಕರು, ಶಿಫಾರಸ್ಸು ಮಾಡಿರುತ್ತಾರೆ.

ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾನಿರೀಕ್ಷಕರವರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 17 ಎಸ್‌ಪಿಎಸ್ 2007, ಬೆಂಗಳೂರು, ದಿನಾಂಕ: 31ನೇ ಜುಲೈ 2007**

ಮೇಲೆ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಡಾ: ಎಂ.ಕೆ. ನಾಗರಾಜ್, ಐಪಿಎಸ್, ಐಜಿಪಿ, ರಾಜ್ಯ ಗುಪ್ತವಾರ್ತೆ, ಬೆಂಗಳೂರು ಇವರಿಗೆ ದಿನಾಂಕ: 15.10.2006 ರಿಂದ 21.01.2007ರ ವರೆಗೆ ವಿಶೇಷ ದುರ್ಬಲತೆ ರಜೆಯನ್ನು ಭಾರತೀಯ ಆಡಳಿತ ಸೇವೆ (ವಿಶೇಷ ದುರ್ಬಲತೆ ರಜೆ) ನಿಯಮಗಳು 1957ರ ನಿಯಮ 3(1)(ii) ರಡಿ ಮಂಜೂರು ಮಾಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಅಶೋಕ್.ಪಿ.ಅತ್ರೆ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ. (ಸೇವೆಗಳು-1).

ಪಿ.ಆರ್. 1445

## INFRASTRUCTURE DEVELOPMENT SECRETARIAT

**Subject:** Constitution of District Public Private Partnership (PPP) Committee under the Chairmanship of the Deputy Commissioner reg.

**Ref:** Infrastructure Policy G.O.No. IDD 32 IDM 2003, Bangalore, dated: 16.07.2007.

**PREAMBLE:**

The Government of Karnataka has come out with a new Infrastructure Policy in July 2007. This Policy envisages setting up of a District PPP Committee to co-ordinate and facilitate the implementation of infrastructure projects, including assisting in obtaining the local clearances and approvals for the PPP projects. It is found appropriate to constitute this Committee under the chairmanship of the Deputy Commissioner of the District with representation from different Department and Industry Associations.

Hence, the State Government is pleased to issue the following order.

**GOVERNMENT ORDER NO: IDD 17 ITS 2007, BANGALORE, DATED: 17th August 2007**

In the circumstances explained in the preamble the Government of Karnataka accords approval for setting up of a District PPP Committee headed by the Deputy Commissioner of the District to co-ordinate and facilitate the implementation of infrastructure projects, including assisting in obtaining clearances and approvals for PPP projects. The Committee shall be as follows:

1. Deputy Commissioner of the district concerned-Chairman.
2. Chief Executive Officer, Zilla Panchayat of the concerned district-Vice Chairman.
3. Commissioner, Urban Development Authority of the District Head Quarter-Member.
4. District Level Officer of the concerned Department proposing the PPP project-Member.
5. Representative of CII District Branch, if any.
6. Representative of KASSIA/SSI Association of the District.
7. Representative of District Chamber of Commerce and Industry, if any.
8. The Joint Director, District Industries Centre-Member Secretary.

The Chairman of the Committee may co-opt/invite additional members as and when required.

The District PPP Committee shall perform the following functions:

i. Identify the PPP projects and initiate action by writing to the concerned Department to develop the projects on PPP basis.
ii. Monitor and expedite acquisition of land for PPP projects approved by the Government.
iii. Facilitate getting district level clearances for PPP projects from different department.
iv. Assist in the implementation of PPP projects by addressing the problems which may arise (e.g. public agitation, law & order, diversion of traffic during construction, etc.).
v. Provide logistic support to Operations & Maintenance activities and convince the public to pay for services as per the concession agreement between the Government and the Concessionaire.
vi. Coordinate with the PPP Cell, set up in the Infrastructure Development Department.

The Committee may conduct quarterly meetings or as and when necessary.

By Order and in the name of the Governor of Karnataka,

**N. MANJULA GEETHA**

Under Secretary to Government,

Infrastructure Development Department.

P.R. 1570

**ಒಳಾಡಳಿತ ಸಚಿವಾಲಯ**

**ವಿಷಯ:** ದಿನಾಂಕ: 1.4.2000 ದಂದು ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯಲ್ಲಿ ಇದ್ದ ಖಾಲಿ ಹುದ್ದೆಗಳ ಪೈಕಿ ಶೇಕಡ 80 ರಷ್ಟು ಹುದ್ದೆಗಳನ್ನು ರದ್ದುಪಡಿಸುವ ಕುರಿತು.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆ: ಲಾ 6 ಈಕಾಅ 2000, ದಿನಾಂಕ: 23.9.2003.

2) ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ, ಬೆಂಗಳೂರು ಇವರ ಪತ್ರ ಸಂಖ್ಯೆ: ಡಿಪಿಎನ್/ಸಿಶಾ–2/36/2006–07, ದಿನಾಂಕ: 12.7.2006.

3) ದಿನಾಂಕ: 17.8.2006 ರಂದು ನಡೆದ ಅಧಿಕಾರಯುತ ಸಮಿತಿಯ ಸಭೆಯ ನಡವಳಿಗಳು (ಸಂಖ್ಯೆ: ಸಿಆಸುಇ 13 ಈಕಾಸ 2006, ದಿನಾಂಕ: 16.9.2006)

4) ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರ ನಂ.ಡಿಪಿಎನ್/ಸಿಶಾ–2/36/2002–03, ದಿನಾಂಕ: 22.9.2006.

5) ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ (ಕಾರ್ಯಾಧ್ಯಯನ–2)ರ ತಿದ್ದುಪಡಿ ನಂ. ಸಿಆಸುಇ 13 ಈಕಾಅ 2006, ದಿನಾಂಕ: 19.12.2006.

6) ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರ ಸಂಖ್ಯೆ: ಡಿಪಿಎನ್/ಸಿಶಾ–1/36/2002–03, ದಿನಾಂಕ: 11.01./2007.

**ಪ್ರಸ್ತಾವನೆ:**

ಮೇಲೆ (1) ರಲ್ಲಿ ಓದಲಾಗಿರುವ ಸರ್ಕಾರದ ಆದೇಶದಲ್ಲಿ ದಿನಾಂಕ: 1.4.2000 ದಂದು ಇದ್ದ ಒಟ್ಟಾರೆ ಖಾಲಿ ಹುದ್ದೆಗಳ ಪೈಕಿ ಶೇಕಡ 80 ರಷ್ಟು ಹುದ್ದೆಗಳನ್ನು ರದ್ದುಪಡಿಸಲು ಅಪರ ಮುಖ್ಯ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ಸಮಿತಿಯನ್ನು ರಚಿಸಲಾಗಿದೆ.

2. ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯ ಎಲ್ಲಾ ಹುದ್ದೆಗಳು ನ್ಯಾಯಾಲಯಕ್ಕೆ ಹೊಂದಿಕೊಂಡಂತೆ ಸರ್ಕಾರದ ಪರವಾಗಿ ಕ್ರಿಮಿನಲ್/ಸಿವಿಲ್ ಪ್ರಕರಣಗಳನ್ನು ನಡೆಸುವ ಕಾರ್ಯವನ್ನು ನಿರ್ವಹಿಸುತ್ತಿರುವುದರಿಂದ ಮೇಲೆ (2) ರಲ್ಲಿ ಓದಲಾಗಿರುವ ಪತ್ರದಲ್ಲಿ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯಲ್ಲಿ ದಿನಾಂಕ: 1.4.2000 ದಂದು ಖಾಲಿ ಇರುವ ಎಲ್ಲಾ ಹುದ್ದೆಗಳನ್ನು ಮುಂದುವರೆಸಲು ಕೋರಿದ್ದರು.

3. ಮೇಲೆ (3) ರಲ್ಲಿ ಓದಲಾಗಿರುವ ಅಧಿಕಾರಯುತ ಸಮಿತಿಯ ಸಭೆಯ ನಡವಳಿಗಳಲ್ಲಿ ಪ್ರಸ್ತುತ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯಲ್ಲಿ 3 ಅಧೀಕ್ಷಕರು, 35 ಬೆರಳಚ್ಚುಗಾರರು ಮತ್ತು 51 ದಲಾಯತ್ ಹುದ್ದೆಗಳನ್ನು ರದ್ದುಪಡಿಸಲು ತೀರ್ಮಾನಿಸಿತು ಹಾಗೂ ದಲಾಯತರ ಹುದ್ದೆಗಳನ್ನು ಗುತ್ತಿಗೆ ಆಧಾರದ ಮೇಲೆ ಭಾಹ್ಯ ಮೂಲಗಳಿಂದ ಭರ್ತಿ ಮಾಡಿಕೊಳ್ಳಲು ಸಹ ಸಮಿತಿಯು ಸೂಚಿಸಿರುತ್ತದೆ.

4. ದಿನಾಂಕ: 17.8.2006 ರಂದು ನಡೆದ ಅಧಿಕಾರಯುಕ್ತ ಸಭೆಯ ನಡವಳಿಯಲ್ಲಿ ರದ್ದುಪಡಿಸಲು ಕೈಗೊಂಡಿರುವ 3 ಅಧೀಕ್ಷಕರ ಹುದ್ದೆಗಳನ್ನು ರದ್ದುಗೊಳಿಸಲು ಎಂದು ನಮೂದಾಗಿರುತ್ತದೆ. ಆದ್ದರಿಂದ 3 "ಅಧೀಕ್ಷಕರ ಹುದ್ದೆಗಳು ಎಂಬುದಕ್ಕೆ ಬದಲಾಗಿ" 3 ದ್ವಿತೀಯ ದರ್ಜೆ ಸಹಾಯಕರ" ಹುದ್ದೆಗಳನ್ನು ರದ್ದುಪಡಿಸಿರುವ ಹುದ್ದೆಗಳು ಎಂದು ತಿದ್ದೋಲೆ ಹೊರಡಿಸುವಂತೆ ಮೇಲೆ (4) ರಲ್ಲಿ ಓದಲಾಗಿರುವ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರು ಕೋರಿದ್ದರು.

5. ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯವರು ಮೇಲೆ (5) ರಲ್ಲಿ ಓದಲಾದ ತಿದ್ದುಪಡಿಯಲ್ಲಿ "3 ಅಧೀಕ್ಷಕರ" ಹುದ್ದೆಗಳ ಬದಲಾಗಿ "3 ದ್ವಿತೀಯ ದರ್ಜೆ ಸಹಾಯಕರ" ಹುದ್ದೆಗಳನ್ನು ರದ್ದುಪಡಿಸುವಂತೆ ತಿದ್ದುಪಡಿ ಮಾಡಿರುತ್ತಾರೆ.

6. ಅದರಿಂದ ಈ ಕೆಳಗೆ ನಮೂದಿಸಿರುವ ಹುದ್ದೆಗಳನ್ನು ರದ್ದುಪಡಿಸಲು ಅಂತಿಮವಾಗಿ ತೀರ್ಮಾನಿಸಲಾಯಿತು.

| ಕ್ರ.ಸಂ. | ಹುದ್ದೆಯ ಹೆಸರು | ಹುದ್ದೆಗಳ ಸಂಖ್ಯೆ |
|---|---|---|
| 1 | ದ್ವಿತೀಯ ದರ್ಜೆ ಸಹಾಯಕರು | 3 |
| 2 | ಬೆರಳಚ್ಚುಗಾರರು | 35 |
| 3 | ದಲಾಯತ್ | 51 |

7. ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರು ಮೇಲೆ ಓದಲಾದ (6)ರ ಪತ್ರದಲ್ಲಿ ರದ್ದುಪಡಿಸಬಹುದಾದ ಖಾಲಿ ಹುದ್ದೆಗಳ ಕಛೇರಿಯ ಹೆಸರು ಮತ್ತು ಸ್ಥಳಗಳ ವಿವರಗಳನ್ನು ನೀಡಿರುತ್ತಾರೆ.

**ಸರ್ಕಾರಿ ಆದೇಶ ಸಂಖ್ಯೆ: ಒಇ 549 ಪಿಪಿಇ 2006, ಬೆಂಗಳೂರು, ದಿನಾಂಕ: 9ನೇ ಮಾರ್ಚ್ 2007**

ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯಲ್ಲಿ ದಿನಾಂಕ: 01.04.2000 ದಂದು ಇದ್ದಂತೆ ಇದ್ದ ಖಾಲಿ ಹುದ್ದೆಗಳ ಪೈಕಿ ಶೇ.80 ರಷ್ಟು ಹುದ್ದೆಗಳನ್ನು ರದ್ದುಪಡಿಸುವ ಬಗ್ಗೆ ದಿನಾಂಕ: 17.08.2006 ದಂದು ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ನಡೆದ ಅಧಿಕಾರಿಯುತ ಸಭೆಯಲ್ಲಿ ಕೈಗೊಂಡ ನಿರ್ಣಯದ ಅನುಸಾರ ಅನುಬಂಧ–1

ರಲ್ಲಿ ತೋರಿಸಿರುವ 3 ದ್ವಿತೀಯ ದರ್ಜೆ ಸಹಾಯಕರ ಹುದ್ದೆಗಳನ್ನು, ಅನುಬಂಧ–2 ರಲ್ಲಿ ತೋರಿಸಿರುವ 35 ಬೆರಳಚ್ಚುಗಾರ ಹುದ್ದೆಗಳನ್ನು (ವೇತನ ಶ್ರೇಣಿ ರೂ.3000–5440) ಮತ್ತು ಅನುಬಂಧ–3 ರಲ್ಲಿ ತೋರಿಸಿರುವ 51 ದಲಾಯತ್ ಹುದ್ದೆಗಳನ್ನು (ವೇತನ ಶ್ರೇಣಿ ರೂ.2500–3850) ಕೂಡಲೇ ಜಾರಿಗೆ ಬರುವಂತೆ ರದ್ದುಪಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್. ನಿಸಾರ್ ಅಹಮದ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ

(ಕಾ. ಮತ್ತು ಸು. ಕಾಫಿಪೋಸ ಮತ್ತು ಅಭಿಯೋಗಗಳು).

**ಅನುಬಂಧ–1**

**ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯಲ್ಲಿ ರದ್ದುಗೊಳಿಸಿರುವ ದ್ವಿತೀಯ ದರ್ಜೆ ಸಹಾಯಕರ (ವೇತನ ಶ್ರೇಣಿ ರೂ.3000–5450) ಹುದ್ದೆಗಳು**

| ಕ್ರ. ಸಂ. | ಕಛೇರಿಯ ಹೆಸರು ಮತ್ತು ಸ್ಥಳ | ಹುದ್ದೆ ಮಂಜೂರಾದ ಸರ್ಕಾರದ ಆದೇಶ ಸಂಖ್ಯೆ ಮತ್ತು ದಿನಾಂಕ | ಹುದ್ದೆಗಳ ಸಂಖ್ಯೆ |
|---|---|---|---|
| 1 | ಸರ್ಕಾರಿ ಅಭಿಯೋಜಕರ ಕಛೇರಿ, ಕಾರವಾರ | ಲಾ 130 ಎಲ್‌ಇಎಜಿ 79, ದಿನಾಂಕ: 7.10.80 | 01 |
| 2 | ಸರ್ಕಾರಿ ಅಭಿಯೋಜಕರ ಕಛೇರಿ, ಬಿಜಾಪುರ | ಲಾ 130 ಎಲ್‌ಇಎಜಿ 79, ದಿನಾಂಕ: 7.10.80 | 01 |
| 3 | ಸರ್ಕಾರಿ ಅಭಿಯೋಜಕರ ಕಛೇರಿ, ಗುಲ್ಬರ್ಗಾ | ಲಾ 310 ಎಲ್‌ಸಿಇ 2001, ದಿನಾಂಕ: 18.10.2002 | 01 |
| | | **ಒಟ್ಟು** | **03** |

**ಅನುಬಂಧ–2**

**ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯಲ್ಲಿ ರದ್ದುಗೊಳಿಸಿರುವ ಬೆರಳಚ್ಚುಗಾರರ (ವೇತನ ಶ್ರೇಣಿ ರೂ.3000–5450) ಹುದ್ದೆಗಳು**

| ಕ್ರ. ಸಂ. | ಕಛೇರಿಯ ಹೆಸರು ಮತ್ತು ಸ್ಥಳ | ಹುದ್ದೆ ಮಂಜೂರಾದ ಸರ್ಕಾರದ ಆದೇಶ ಸಂಖ್ಯೆ ಮತ್ತು ದಿನಾಂಕ | ಹುದ್ದೆಗಳ ಸಂಖ್ಯೆ |
|---|---|---|---|
| 1 | ಸಹಾಯಕ ಸರ್ಕಾರಿ ಅಭಿಯೋಜಕರ ಕಛೇರಿ, ತುರುವೇಕೆರೆ | ಲಾ 172 ಎಲ್‌ಸಿಇ 84, ದಿನಾಂಕ: 18.2.87 | 01 |
| 2 | ಸಹಾಯಕ ಸರ್ಕಾರಿ ಅಭಿಯೋಜಕರ ಕಛೇರಿ, ಗೌರಿಬಿದನೂರು | ಲಾ 219 ಪಿಪಿಇ 84, ದಿನಾಂಕ: 19.8.85 | 01 |
| 3 | ಸಹಾಯಕ ಸರ್ಕಾರಿ ಅಭಿಯೋಜಕರ ಕಛೇರಿ, ಚಿಂತಾಮಣಿ. | ಲಾ 116 ಎಲ್‌ಸಿಇ 96, ದಿನಾಂಕ: 31.3.97. | 01 |
| 4 | ಸರ್ಕಾರಿ ಅಭಿಯೋಜಕರ ಕಛೇರಿ, ಮಡಿಕೇರಿ | ಲಾ 96 ಪಿಪಿಇ 85, ದಿನಾಂಕ: 3.6.85 | 01 |
| 5 | ಸಹಾಯಕ ಸರ್ಕಾರಿ ಅಭಿಯೋಜಕರ ಕಛೇರಿ, ವಿರಾಜಪೇಟೆ. | ಲಾ 82 ಪಿಪಿಇ 84, ದಿನಾಂಕ: 31.10.84 | 01 |
| 6 | ಸಹಾಯಕ ಸರ್ಕಾರಿ ಅಭಿಯೋಜಕರ ಕಛೇರಿ, ಮೊಳಕಾಲ್ಮೂರು. | ಲಾ 27 ಎಲ್‌ಸಿಇ 82, ದಿನಾಂಕ: 6.1.84 | 01 |
| 7 | ಸಹಾಯಕ ಸರ್ಕಾರಿ ಅಭಿಯೋಜಕರ ಕಛೇರಿ, ಹಡಗಲಿ | ಲಾ 219 ಪಿಪಿಇ 84, ದಿನಾಂಕ: 22.12.84 | 01 |
| 8 | ಸರ್ಕಾರಿ ಅಭಿಯೋಜಕರ ಕಛೇರಿ, ಬಳ್ಳಾರಿ | ಲಾ 96 ಪಿಪಿಇ 85, ದಿನಾಂಕ: 3.6.85 | 01 |
| 9 | ಅಧಿಕ ಸಹಾಯಕ ಸರ್ಕಾರಿ ಅಭಿಯೋಜಕರ ಕಛೇರಿ, ಸಿರ್ಸಿ | ಲಾ 219 ಪಿಪಿಇ 84, ದಿನಾಂಕ: 19.8.85 | 01 |
| 10 | ಸಹಾಯಕ ಸರ್ಕಾರಿ ಅಭಿಯೋಜಕರ ಕಛೇರಿ, ಸಂಕೇಶ್ವರ | ಲಾ 179 ಪಿಪಿಇ 2003, ದಿನಾಂಕ: 19.4.2004. | 01 |
| 11 | ಅಧಿಕ ಸಹಾಯಕ ಸರ್ಕಾರಿ ಅಭಿಯೋಜಕರ ಕಛೇರಿ, ರಾಯಬಾಗ್. | ಲಾ 185 ಎಲ್‌ಸಿಇ 95, ದಿನಾಂಕ: 29.3.96 | 01 |
| 12 | ಸಹಾಯಕ ಸರ್ಕಾರಿ ಅಭಿಯೋಜಕರ ಕಛೇರಿ, ನರಗುಂದ. | ಲಾ 96 ಎಲ್‌ಸಿಇ 88, ದಿನಾಂಕ: 3.7.89 | 01 |
| 13 | ಸಹಾಯಕ ಸರ್ಕಾರಿ ಅಭಿಯೋಜಕರ ಕಛೇರಿ, ಲಕ್ಷ್ಮೇಶ್ವರ. | ಲಾ 219 ಪಿಪಿಇ 84, ದಿನಾಂಕ: 19.8.85 | 01 |
| 14 | ಸಹಾಯಕ ಸರ್ಕಾರಿ ಅಭಿಯೋಜಕರ ಕಛೇರಿ, ಮುಂಡರಗಿ | ಲಾ 46 ಪಿಪಿಇ 98, ದಿನಾಂಕ: 15.10.98 | 01 |
| 15 | ಸಹಾಯಕ ಸರ್ಕಾರಿ ಅಭಿಯೋಜಕರ ಕಛೇರಿ, ಕುಂದಗೋಳ | ಲಾ 219 ಪಿಪಿಇ 84, ದಿನಾಂಕ: 22.12.84 | 01 |
| 16 | ಸರ್ಕಾರಿ ಅಭಿಯೋಜಕರ ಕಛೇರಿ, ಬಿಜಾಪುರ | ಲಾ 130 ಎಲ್‌ಎಜಿ 79, ದಿನಾಂಕ: 7.10.80 | 01 |
| 17 | ಸಹಾಯಕ ಸರ್ಕಾರಿ ಅಭಿಯೋಜಕರ ಕಛೇರಿ, ಸಿಂಧಗಿ | ಲಾ 216 ಪಿಪಿಇ 82, ದಿನಾಂಕ: 17.1.85 | 01 |

| ಕ್ರ. ಸಂ. | ಕಛೇರಿಯ ಹೆಸರು ಮತ್ತು ಸ್ಥಳ | ಹುದ್ದೆ ಮಂಜೂರಾದ ಸರ್ಕಾರದ ಆದೇಶ ಸಂಖ್ಯೆ ಮತ್ತು ದಿನಾಂಕ | ಹುದ್ದೆಗಳ ಸಂಖ್ಯೆ |
|---|---|---|---|
| 18 | ಸಹಾಯಕ ಸರ್ಕಾರಿ ಅಭಿಯೋಜಕರ ಕಛೇರಿ, ಬಸವನಬಾಗೇವಾಡಿ | ಲಾ 219 ಪಿಪಿಇ 84, ದಿನಾಂಕ: 22.12.84 | 01 |
| 19 | ಸಹಾಯಕ ಸರ್ಕಾರಿ ಅಭಿಯೋಜಕರ ಕಛೇರಿ, ಮುದ್ದೇಬಿಹಾಳ | ಲಾ 219 ಪಿಪಿಇ 84, ದಿನಾಂಕ: 22.12.84 | 01 |
| 20 | ಸಹಾಯಕ ಸರ್ಕಾರಿ ಅಭಿಯೋಜಕರ ಕಛೇರಿ, ಇಂಡಿ. | ಲಾ 219 ಪಿಪಿಇ 84, ದಿನಾಂಕ: 22.12.84 | 01 |
| 21 | ಸಹಾಯಕ ಸರ್ಕಾರಿ ಅಭಿಯೋಜಕರ ಕಛೇರಿ, ಶಿಗ್ಗಾಂವ್ | ಲಾ 41 ಎಲ್‌ಸಿಇ 90, ದಿನಾಂಕ: 3.3.94 | 01 |
| 22 | ಅಭಿಯೋಗ ಉಪನಿರ್ದೇಶಕರ ಕಛೇರಿ, ಗುಲ್ಬರ್ಗಾ | ಲಾ 310 ಎಲ್‌ಸಿಇ 2001, ದಿನಾಂಕ: 18.10.2002 | 01 |
| 23 | ಸರ್ಕಾರಿ ಅಭಿಯೋಜಕರ ಕಛೇರಿ, ಗುಲ್ಬರ್ಗಾ | ಲಾ 310 ಎಲ್‌ಸಿಇ 2001, ದಿನಾಂಕ: 18.10.2002 | 02 |
| 24 | ಸಹಾಯಕ ಸರ್ಕಾರಿ ಅಭಿಯೋಜಕರ ಕಛೇರಿ, ಶಹಾಪುರ | ಲಾ 216 ಪಿಪಿಇ 82, ದಿನಾಂಕ: 17.1.85 | 01 |
| 25 | ಸಹಾಯಕ ಸರ್ಕಾರಿ ಅಭಿಯೋಜಕರ ಕಛೇರಿ, ಸೇಡಂ | ಲಾ 216 ಪಿಪಿಇ 82, ದಿನಾಂಕ: 17.1.85 | 01 |
| 26 | ಸಹಾಯಕ ಸರ್ಕಾರಿ ಅಭಿಯೋಜಕರ ಕಛೇರಿ, ಶಹಬಾದ್ | ಲಾ 16 ಎಲ್‌ಸಿಇ 96, ದಿನಾಂಕ: 31.3.97 | 01 |
| 27 | ಸಹಾಯಕ ಸರ್ಕಾರಿ ಅಭಿಯೋಜಕರ ಕಛೇರಿ, ಔರಾದ್ | ಲಾ 216 ಪಿಪಿಇ 82, ದಿನಾಂಕ: 17.1.85 | 01 |
| 28 | ಸಹಾಯಕ ಸರ್ಕಾರಿ ಅಭಿಯೋಜಕರ ಕಛೇರಿ, ಭಾಲ್ಕಿ | ಲಾ 216 ಪಿಪಿಇ 82, ದಿನಾಂಕ: 17.1.85 | 01 |
| 29 | ಸಹಾಯಕ ಸರ್ಕಾರಿ ಅಭಿಯೋಜಕರ ಕಛೇರಿ, ಬಸವಕಲ್ಯಾಣ | ಲಾ 216 ಪಿಪಿಇ 82, ದಿನಾಂಕ: 17.1.85 | 01 |
| 30 | ವಿಶೇಷ ಸರ್ಕಾರಿ ಅಭಿಯೋಜಕರ ಕಛೇರಿ, ರಾಯಚೂರು | ಲಾ 16 ಎಲ್‌ಸಿಇ 90, ದಿನಾಂಕ: 19.1.93 | 01 |
| 31 | ಸಹಾಯಕ ಸರ್ಕಾರಿ ಅಭಿಯೋಜಕರ ಕಛೇರಿ, ದೇವದುರ್ಗ | ಲಾ 216 ಪಿಪಿಇ 82, ದಿನಾಂಕ: 22.12.84 | 01 |
| 32 | ಸಹಾಯಕ ಸರ್ಕಾರಿ ಅಭಿಯೋಜಕರ ಕಛೇರಿ, ಲಿಂಗಸಗೂರು | ಲಾ 216 ಪಿಪಿಇ 82, ದಿನಾಂಕ: 22.12.84 | 01 |
| 33 | ಸಹಾಯಕ ಸರ್ಕಾರಿ ಅಭಿಯೋಜಕರ ಕಛೇರಿ, ಮಾನ್ವಿ | ಲಾ 216 ಪಿಪಿಇ 82, ದಿನಾಂಕ: 22.12.84 | 01 |
| 34 | ಸಹಾಯಕ ಸರ್ಕಾರಿ ಅಭಿಯೋಜಕರ ಕಛೇರಿ, ಕುಷ್ಟಗಿ | ಲಾ 216 ಪಿಪಿಇ 82, ದಿನಾಂಕ: 22.12.84 | 01 |
| | | **ಒಟ್ಟು** | **35** |

**ಅನುಬಂಧ–3**

**ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯಲ್ಲಿ ರದ್ದುಗೊಳಿಸಿರುವ ದಲಾಯತ್**

**(ವೇತನ ಶ್ರೇಣಿ ರೂ.2500–3850) ಹುದ್ದೆಗಳು**

| ಕ್ರ. ಸಂ. | ಕಛೇರಿಯ ಹೆಸರು ಮತ್ತು ಸ್ಥಳ | ಹುದ್ದೆ ಮಂಜೂರಾದ ಸರ್ಕಾರದ ಆದೇಶ ಸಂಖ್ಯೆ ಮತ್ತು ದಿನಾಂಕ | ಹುದ್ದೆಗಳ ಸಂಖ್ಯೆ |
|---|---|---|---|
| 1 | ಸರ್ಕಾರಿ ಅಭಿಯೋಜಕರ ಕಛೇರಿ, ಬೆಂಗಳೂರು ನಗರ, ಬೆಂಗಳೂರು | ಲಾ 116 ಎಲ್‌ಸಿಇ 96, ದಿನಾಂಕ: 13.3.97 | 02 |
| 2 | ಸರ್ಕಾರಿ ಅಭಿಯೋಜಕರ ಕಛೇರಿ, ಎನ್.ಡಿ.ಪಿ.ಎಸ್. ನ್ಯಾಯಾಲಯ, ಬೆಂಗಳೂರು | ಲಾ 184 ಎಲ್‌ಸಿಇ 95, ದಿನಾಂಕ: 13.3.97 | 01 |
| 3 | ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರ ಕಛೇರಿ, ಸಿಎಂಎಂ ನ್ಯಾಯಾಲಯ, ಬೆಂಗಳೂರು ನಗರ | ಲಾ 219 ಪಿಪಿಇ 84, ದಿನಾಂಕ: 31.1.85 | 01 |
| 4 | ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರ ಕಛೇರಿ, 3ನೇ ಸಿಎಂಎಂ ನ್ಯಾಯಾಲಯ, ಬೆಂಗಳೂರು ನಗರ | ಲಾ 219 ಪಿಪಿಇ 84, ದಿನಾಂಕ: 31.1.85 | 01 |
| 5 | ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರ ಕಛೇರಿ, 2ನೇ ಸಂಚಾರಿ ಸಿಎಂಎಂ ನ್ಯಾಯಾಲಯ, ಬೆಂಗಳೂರು ನಗರ | ಲಾ 219 ಪಿಪಿಇ 84, ದಿನಾಂಕ: 31.1.85 | 01 |
| 6 | ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರ ಕಛೇರಿ, ಜೆಎಂಎಫ್‌ಸಿ ನ್ಯಾಯಾಲಯ, ಮಾರಾಟ ತೆರಿಗೆ ಬೆಂಗಳೂರು | ಲಾ 143 ಎಲ್‌ಸಿಇ 88, ದಿನಾಂಕ: 17.3.92 | 01 |

| ಕ್ರ. ಸಂ. | ಕಛೇರಿಯ ಹೆಸರು ಮತ್ತು ಸ್ಥಳ | ಹುದ್ದೆ ಮಂಜೂರಾದ ಸರ್ಕಾರದ ಆದೇಶ ಸಂಖ್ಯೆ ಮತ್ತು ದಿನಾಂಕ | ಹುದ್ದೆಗಳ ಸಂಖ್ಯೆ |
|---|---|---|---|
| 7 | ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರ ಕಛೇರಿ, ಸಿಎಂಎಂ ನ್ಯಾಯಾಲಯ, ಬೆಂಗಳೂರು ಗ್ರಾಮಾಂತರ | ಲಾ 219 ಪಿಪಿಇ 84, ದಿನಾಂಕ: 31.1.85 | 01 |
| 8 | ಸಹಾಯಕ ಸರ್ಕಾರಿ ಅಭಿಯೋಜಕರ ಕಛೇರಿ, ಚನ್ನಪಟ್ಟಣ | ಲಾ 172 ಎಲ್‌ಸಿಇ 84, ದಿನಾಂಕ: 19.2.87 | 01 |
| 9 | ಸಹಾಯಕ ಸರ್ಕಾರಿ ಅಭಿಯೋಜಕರ ಕಛೇರಿ, ಪಾವಗಡ | ಲಾ 219 ಪಿಪಿಇ 84, ದಿನಾಂಕ: 31.1.85 | 01 |
| 10 | ಸಹಾಯಕ ಸರ್ಕಾರಿ ಅಭಿಯೋಜಕರ ಕಛೇರಿ, ಗುಡಿಬಂಡೆ | ಲಾ 46 ಪಿಪಿಇ 98, ದಿನಾಂಕ: 15.10.98 | 01 |
| 11 | ಸರ್ಕಾರಿ ಅಭಿಯೋಜಕರ ಕಛೇರಿ, ಮೈಸೂರು | ಲಾ 116 ಎಲ್‌ಸಿಇ 96, ದಿನಾಂಕ: 31.3.97 | 01 |
| 12 | ಸಹಾಯಕ ಸರ್ಕಾರಿ ಅಭಿಯೋಜಕರ ಕಛೇರಿ, ಮೈಸೂರು | ಲಾ 130 ಎಲ್‌ಎಜಿ 79, ದಿನಾಂಕ: 7.10.80 | 01 |
| 13 | ಸಹಾಯಕ ಅಭಿಯೋಗ ನಿರ್ದೇಶಕರ ಕಛೇರಿ, ಆರಕ್ಷಕ ಆಯುಕ್ತ ಕಛೇರಿ, ಮೈಸೂರು | ಲಾ 207 ಪಿಪಿಇ 93, ದಿನಾಂಕ: 13.7.94 | 01 |
| 14 | ಸಹಾಯಕ ಸರ್ಕಾರಿ ಅಭಿಯೋಜಕರ ಕಛೇರಿ, ಪಿರಿಯಾಪಟ್ಟಣ | ಲಾ 54 ಎಲ್‌ಸಿಇ 85, ದಿನಾಂಕ: 29.2.88 | 01 |
| 15 | ಸಹಾಯಕ ಸರ್ಕಾರಿ ಅಭಿಯೋಜಕರ ಕಛೇರಿ, ಹೆಗ್ಗಡದೇವನಕೋಟೆ | ಲಾ 68 ಎಲ್‌ಸಿಇ 85, ದಿನಾಂಕ: 8.11.89 | 01 |
| 16 | ಸಹಾಯಕ ಸರ್ಕಾರಿ ಅಭಿಯೋಜಕರ ಕಛೇರಿ, ಯಳಂದೂರು | ಲಾ 46 ಪಿಪಿಇ 98, ದಿನಾಂಕ: 15.10.98 | 01 |
| 17 | ಸಹಾಯಕ ಸರ್ಕಾರಿ ಅಭಿಯೋಜಕರ ಕಛೇರಿ, ಗುಂಡ್ಲುಪೇಟೆ | ಲಾ 157 ಎಲ್‌ಸಿಇ 91, ದಿನಾಂಕ: 29.1.92 | 01 |
| 18 | ಸರ್ಕಾರಿ ಅಭಿಯೋಜಕರ ಕಛೇರಿ, ಮಂಡ್ಯ | ಲಾ 69 ಎಲ್‌ಸಿಇ 92, ದಿನಾಂಕ: 15.6.92 | 01 |
| 19 | ಸಹಾಯಕ ಸರ್ಕಾರಿ ಅಭಿಯೋಜಕರ ಕಛೇರಿ, ಕೆ.ಆರ್.ಪೇಟೆ | ಲಾ 219 ಪಿಪಿಇ 84, ದಿನಾಂಕ: 31.1.85 | 01 |
| 20 | ಸರ್ಕಾರಿ ಅಭಿಯೋಜಕರ ಕಛೇರಿ, ಹಾಸನ | ಲಾ 97 ಎಲ್‌ಸಿಇ 90, ದಿನಾಂಕ: 25.11.92 | 01 |
| 21 | ಸಹಾಯಕ ಸರ್ಕಾರಿ ಅಭಿಯೋಜಕರ ಕಛೇರಿ, ಅರಕಲಗೂಡು | ಲಾ 219 ಪಿಪಿಇ 84, ದಿನಾಂಕ: 31.1.85 | 01 |
| 22 | ಸಹಾಯಕ ಸರ್ಕಾರಿ ಅಭಿಯೋಜಕರ ಕಛೇರಿ, ಆಲೂರು | ಲಾ 46 ಪಿಪಿಇ 98, ದಿನಾಂಕ: 15.10.98 | 01 |
| 23 | ಸಹಾಯಕ ಸರ್ಕಾರಿ ಅಭಿಯೋಜಕರ ಕಛೇರಿ, ಬೇಲೂರು | ಲಾ 70 ಎಲ್‌ಸಿಇ 91, ದಿನಾಂಕ: 17.3.92 | 01 |
| 24 | ಸಹಾಯಕ ಸರ್ಕಾರಿ ಅಭಿಯೋಜಕರ ಕಛೇರಿ, ಸಕಲೇಶಪುರ | ಲಾ 219 ಪಿಪಿಇ 84, ದಿನಾಂಕ: 31.1.85 | 01 |
| 25 | ಸಹಾಯಕ ಸರ್ಕಾರಿ ಅಭಿಯೋಜಕರ ಕಛೇರಿ, ದಾವಣಗೆರೆ | ಲಾ 80 ಪಿಪಿಇ 84, ದಿನಾಂಕ: 15.12.84 | 01 |
| 26 | ಸರ್ಕಾರಿ ಅಭಿಯೋಜಕರ ಕಛೇರಿ, ಚಿತ್ರದುರ್ಗ | ಲಾ 56 ಪಿಪಿಇ 86, ದಿನಾಂಕ: 7.3.86 | 01 |
| 27 | ಸಹಾಯಕ ಅಭಿಯೋಗ ನಿರ್ದೇಶಕರ ಕಛೇರಿ (ಆರಕ್ಷಕ ಅಧೀಕ್ಷಕರ ಕಛೇರಿ), ಚಿತ್ರದುರ್ಗ | ಲಾ 100 ಪಿಪಿಇ 81, ದಿನಾಂಕ: 30.4.81 | 01 |
| 28 | 1ನೇ ಪರ ಸಹಾಯಕ ಸರ್ಕಾರಿ ಅಭಿಯೋಜಕರ ಕಛೇರಿ, ಭದ್ರಾವತಿ | ಲಾ 180 ಎಲ್‌ಸಿಇ 90, ದಿನಾಂಕ: 16.3.93 | 01 |
| 29 | ಸಹಾಯಕ ಸರ್ಕಾರಿ ಅಭಿಯೋಜಕರ ಕಛೇರಿ, ಬಳ್ಳಾರಿ | ಲಾ 174 ಎಲ್‌ಸಿಇ 90, ದಿನಾಂಕ: 17.3.92 | 01 |
| 30 | ಸಹಾಯಕ ಸರ್ಕಾರಿ ಅಭಿಯೋಜಕರ ಕಛೇರಿ, ಹಗರಿಬೊಮ್ಮನಹಳ್ಳಿ | ಲಾ 46 ಪಿಪಿಇ 98, ದಿನಾಂಕ: 15.10.98 | 01 |
| 31 | ಸಹಾಯಕ ಸರ್ಕಾರಿ ಅಭಿಯೋಜಕರ ಕಛೇರಿ, ಶಿರುಗುಪ್ಪ | ಲಾ 219 ಪಿಪಿಇ 84, ದಿನಾಂಕ: 31.1.85 | 01 |
| 32 | ಅಭಿಯೋಗ ಉಪನಿರ್ದೇಶಕರ ಕಛೇರಿ, ಮಂಗಳೂರು | ಲಾ 80 ಪಿಪಿಇ 84, ದಿನಾಂಕ: 15.12.84 | 01 |
| 33 | ಸಹಾಯಕ ಸರ್ಕಾರಿ ಅಭಿಯೋಜಕರ ಕಛೇರಿ, ಕಾರ್ಕಳ | ಲಾ 157 ಪಿಪಿಇ 83, ದಿನಾಂಕ: 24.5.84 | 01 |
| 34 | ಸರ್ಕಾರಿ ಅಭಿಯೋಜಕರ ಕಛೇರಿ, ಮಂಗಳೂರು | ಲಾ 130 ಎಲ್‌ಇಜಿ 79, ದಿನಾಂಕ: 7.10.80 | 01 |
| 35 | ಸಹಾಯಕ ಸರ್ಕಾರಿ ಅಭಿಯೋಜಕರ ಕಛೇರಿ, ಉಡುಪಿ | ಲಾ 245 ಎಲ್‌ಸಿಇ 2001, ದಿನಾಂಕ: 27.12.2001 | 01 |
| 36 | ಸಹಾಯಕ ಸರ್ಕಾರಿ ಅಭಿಯೋಜಕರ ಕಛೇರಿ, ಹೊನ್ನಾವರ | ಲಾ 219 ಪಿಪಿಇ 84, ದಿನಾಂಕ: 31.1.85 | 01 |
| 37 | ಸಹಾಯಕ ಸರ್ಕಾರಿ ಅಭಿಯೋಜಕರ ಕಛೇರಿ, ಮುಂಡಗೋಡು | ಲಾ 96 ಎಲ್‌ಸಿಇ 92, ದಿನಾಂಕ: 21.3.95 | 01 |

| ಕ್ರ. ಸಂ. | ಕಛೇರಿಯ ಹೆಸರು ಮತ್ತು ಸ್ಥಳ | ಹುದ್ದೆ ಮಂಜೂರಾದ ಸರ್ಕಾರದ ಆದೇಶ ಸಂಖ್ಯೆ ಮತ್ತು ದಿನಾಂಕ | ಹುದ್ದೆಗಳ ಸಂಖ್ಯೆ |
|---|---|---|---|
| 38 | ಸಹಾಯಕ ಸರ್ಕಾರಿ ಅಭಿಯೋಜಕರ ಕಛೇರಿ, ಮೂಡಿಗೆರೆ | ಲಾ 251 ಎಲ್‌ಸಿಇ 2001, ದಿನಾಂಕ: 13.9.2001 | 01 |
| 39 | ಸಹಾಯಕ ಸರ್ಕಾರಿ ಅಭಿಯೋಜಕರ ಕಛೇರಿ, ಕೊಪ್ಪ | ಲಾ 130 ಎಲ್‌ಸಿಇ 90, ದಿನಾಂಕ: 7.3.91 | 01 |
| 40 | ಸಹಾಯಕ ಅಭಿಯೋಗ ನಿರ್ದೇಶಕರ ಕಛೇರಿ, (ಆರಕ್ಷಕ ಅಧೀಕ್ಷಕರ ಕಛೇರಿ), ಧಾರವಾಡ | ಲಾ 100 ಪಿಪಿಇ 81, ದಿನಾಂಕ: 30.4.81 | 01 |
| 41 | ಸಹಾಯಕ ಸರ್ಕಾರಿ ಅಭಿಯೋಜಕರ ಕಛೇರಿ, ನವಲಗುಂದ | ಲಾ 219 ಪಿಪಿಇ 84, ದಿನಾಂಕ: 31.1.85 | 01 |
| 42 | ಸರ್ಕಾರಿ ಅಭಿಯೋಜಕರ ಕಛೇರಿ, ಬಿಜಾಪುರ | ಲಾ 116 ಎಲ್‌ಸಿಇ 96, ದಿನಾಂಕ: 31.5.97 | 01 |
| 43 | ಸಹಾಯಕ ಸರ್ಕಾರಿ ಅಭಿಯೋಜಕರ ಕಛೇರಿ, ಬೀಳಗಿ | ಲಾ 35 ಎಲ್‌ಸಿಇ 90, ದಿನಾಂಕ: 23.3.93 | 01 |
| 44 | ಸರ್ಕಾರಿ ಅಭಿಯೋಜಕರ ಕಛೇರಿ, ಗುಲ್ಬರ್ಗ | ಲಾ 310 ಎಲ್‌ಸಿಇ 2001, ದಿನಾಂಕ: 18.10.2002 | 02 |
| 45 | ಸಹಾಯಕ ಸರ್ಕಾರಿ ಅಭಿಯೋಜಕರ ಕಛೇರಿ, ಆಳಂದ್ | ಲಾ 219 ಪಿಪಿಇ 84, ದಿನಾಂಕ: 31.1.85 | 01 |
| 46 | ಸಹಾಯಕ ಸರ್ಕಾರಿ ಅಭಿಯೋಜಕರ ಕಛೇರಿ, ಚಿಂಚೋಳಿ | ಲಾ 219 ಪಿಪಿಇ 84, ದಿನಾಂಕ: 31.1.85 | 01 |
| 47 | ಸಹಾಯಕ ಅಭಿಯೋಗ ನಿರ್ದೇಶಕರ ಕಛೇರಿ, (ಆರಕ್ಷಕ ಅಧೀಕ್ಷಕರ ಕಛೇರಿ ಆವರಣ), ಬೀದರ್ | ಲಾ 100 ಪಿಪಿಇ 81, ದಿನಾಂಕ: 30.4.81 | 01 |
| 48 | ಸಹಾಯಕ ಅಭಿಯೋಗ ನಿರ್ದೇಶಕರ ಕಛೇರಿ, (ಆರಕ್ಷಕ ಅಧೀಕ್ಷಕರ ಕಛೇರಿ ಆವರಣ), ಕೊಪ್ಪಳ | ಲಾ 18 ಎಲ್‌ಸಿಇ 97 (ಭಾಗ-2), ದಿನಾಂಕ: 4.5.2000 | 01 |
| 49 | ಸಹಾಯಕ ಸರ್ಕಾರಿ ಅಭಿಯೋಜಕರ ಕಛೇರಿ, ಗಂಗಾವತಿ | ಲಾ 219 ಪಿಪಿಇ 84, ದಿನಾಂಕ: 31.1.85 | 01 |
| | | ಒಟ್ಟು | 51 |

**ಆರ್. ನಿಸಾರ್ ಅಹಮದ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ
(ಕಾ. ಮತ್ತು ಸು. ಕಾಫಿಪೋಸ ಮತ್ತು ಅಭಿಯೋಗಗಳು).

ಪಿ.ಆರ್. 478

**ವಿಷಯ:** ರಾಜ್ಯದಲ್ಲಿ ಅನಧಿಕೃತವಾಗಿ ಬೆಳೆಯಲಾದ ಗಸಗಸೆ ಬೆಳೆಯನ್ನು (ಅಫೀಮ್) ವಿಲೇವಾರಿಪಡಿಸಲು ರಾಜ್ಯಪತ್ರದಲ್ಲಿ ಪ್ರಕಟಗೊಳಿಸುವ ಬಗ್ಗೆ-ವಲಯ ಮಟ್ಟದಲ್ಲಿ ವಿಲೇವಾರಿ ಸಮಿತಿಯ ರಚನೆ-ಆದೇಶ.

**ಓದಲಾಗಿದೆ:** ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾನಿರೀಕ್ಷಕರು, ಬೆಂಗಳೂರು ಇವರ ಪತ್ರ ಸಂಖ್ಯೆ: ಎಸ್.ಎಮ್.ಎಸ್.(3)/13/2005-06, ದಿನಾಂಕ: 22.8.2005.

**ಪ್ರಸ್ತಾವನೆ:**

ಮೇಲೆ ಓದಲಾಗಿರುವ ದಿನಾಂಕ: 22.8.2005ರ ಪತ್ರದಲ್ಲಿ ರಾಜ್ಯದ ಬೆಂಗಳೂರು ಗ್ರಾಮಾಂತರ, ಕೋಲಾರ, ಮಂಡ್ಯ ಹಾಗೂ ಬೀದರ್ ಜಿಲ್ಲೆಯಲ್ಲಿ ಅನಧಿಕೃತವಾಗಿ ಬೆಳೆದಿರುವ ನಿಬಂಧಿತ ಗಸಗಸೆ (ಅಫೀಮ್) ಬೆಳೆಯನ್ನು ಜಪ್ತಿಮಾಡಿ ಬೆಳೆಯನ್ನು ಸುರಕ್ಷಿತವಾಗಿ ಇಡಲು ಪೊಲೀಸ್ ಸಿಬ್ಬಂದಿಯವರನ್ನು ನೇಮಿಸಲಾಗಿದೆ ಮತ್ತು ಸದರಿ ಪ್ರಕರಣಗಳಲ್ಲಿ ಜಪ್ತಿ ಮಾಡಲಾದ ಗಸಗಸೆ ಗಿಡಗಳ ಮೌಲ್ಯ ಮಾರುಕಟ್ಟೆ ದರದಲ್ಲಿ ಕೋಟಿಗಟ್ಟಲೆ ರೂಪಾಯಿಯಾಗುತ್ತದೆ. ಈ ಬೃಹತ್ ಮತ್ತು ಅತಿ ಮೌಲ್ಯವಾದ ಮುದ್ದೆಮಾಲನ್ನು ನೈಸರ್ಗಿಕ ವಿಕೋಪಗಳಿಂದ ಕಳ್ಳಕಾಕರಿಂದ ಸುರಕ್ಷಿತವಾಗಿಡುವುದು ಮತ್ತು ಅದರ ದುರುಪಯೋಗವನ್ನು ತಪ್ಪಿಸಲು ಜಪ್ತಿ ಮಾಡಲಾದ ಗಸಗಸೆ ಬೆಳೆಯನ್ನು ನ್ಯಾಯಾಲಯದ ಪೂರ್ವ ವಿಚಾರಣೆ ಸಂದರ್ಭದಲ್ಲಿ (pre trial disposal of Drugs) ಆದಷ್ಟು ಬೇಗನೆ ಸುರಕ್ಷಿತವಾಗಿ ನಾಶಪಡಿಸುವುದು ಅತಿ ಅವಶ್ಯಕವಾಗಿರುತ್ತದೆ. ಆದ ಕಾರಣ NDPS ಅಧಿನಿಯಮದ ಅನುಸಾರ ರಾಜ್ಯಪತ್ರದಲ್ಲಿ ಜಪ್ತಿ ಮತ್ತು ವಿಲೇವಾರಿ ಬಗ್ಗೆ ಪ್ರಕಟಿಸುವಂತೆ ಹಾಗೂ Disposal Committee ರಚಿಸಲು ಕೋರಿರುತ್ತಾರೆ. ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಒಇ 04 ಪಿಎನ್‌ಡಿ 2004, ದಿನಾಂಕ: 26ನೇ ಜೂನ್ 2007**

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ NDPS ಆಕ್ಟ್ ಕಲಂ 52-ಎ(1)ರ ಉಪಬಂಧಗಳ ಅನುಸಾರ ಕರ್ನಾಟಕ ರಾಜ್ಯದ ಬೆಂಗಳೂರು ಗ್ರಾಮಾಂತರ, ಕೋಲಾರ, ಮಂಡ್ಯ ಹಾಗೂ ಬೀದರ್ ಜಿಲ್ಲೆಯಲ್ಲಿ ಅನಧಿಕೃತವಾಗಿ ಬೆಳೆದಿರುವ ನಿರ್ಬಂಧಿತ ಗಸಗಸೆ (ಅಫೀಮ್) ಗಳ ಪ್ರಮಾಣ ಈ ಬಗ್ಗೆ ದಾಖಲಾದ ಪ್ರಕರಣಗಳ ವಿವರಗಳನ್ನು ಇದರೊಂದಿಗೆ ಲಗತ್ತಿಸಿರುವ ಅನುಬಂಧದಲ್ಲಿ ಪ್ರಕಟಿಸಲಾಗಿದೆ. S.O.No.1/89 of Government of India, Ministry of Finance (Department of Revenue) new Delhi, Dated: 13.6.1989ರ section 5 ರ ಅನುಸಾರ ಮತ್ತು NDPS Act 1988ರ ಕಲಂ 53-ಎ(1) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸುತ್ತಾ ಅನಧಿಕೃತವಾಗಿ ಗಸಗಸೆ (ಅಫೀಮ್)

ಬೆಳೆಯಲಾದ ಸ್ಥಳಗಳ ಅಧಿಕಾರ ವ್ಯಾಪ್ತಿಯಲ್ಲಿ ಬರುವ ಆಯಾ ವಲಯದ IGP ಅಧಿಕಾರಿಗಳ ಅಧ್ಯಕ್ಷತೆಯಲ್ಲಿ ಆಯಾ ವಲಯದ ಅಧೀನದಲ್ಲಿರುವ 1 ಜಿಲ್ಲಾ ಪೊಲೀಸ್ ಅಧೀಕ್ಷಕರು, IGP ಯವರ ವಿವೇಚನೆಗೆ ಒಳಪಟ್ಟಂತೆ 1 ಬೇರೆ ಜಿಲ್ಲಾ ಪೊಲೀಸ್ ಅಧೀಕ್ಷಕರು ಹೀಗೆ ಒಬ್ಬರು ಅಧ್ಯಕ್ಷರು ಮತ್ತು ಇಬ್ಬರು ಸದಸ್ಯರನ್ನೊಳಗೊಂಡಂತೆ ಸಮಿತಿಯನ್ನು ಅನಧಿಕೃತವಾಗಿ ಬೆಳೆಯಲಾದ ಗಸಗಸೆ (ಅಫೀಮ್) ಅನ್ನು ಸದರಿ ನಿಯಮದಡಿಯಲ್ಲಿ ನಿರ್ದಿಷ್ಟಪಡಿಸಿದ ಕಾರ್ಯವಿಧಾನವನ್ನು ಅನುಸರಿಸಿ ನಿರ್ಣಯವನ್ನು ತೆಗೆದುಕೊಂಡು ವಿಲೇ ಮಾಡಲು "Narcotic Drugs and Psychotrophic Substances Disposal Committee" ಯನ್ನು ರಚಿಸಲು ಸರ್ಕಾರದ ಒಪ್ಪಿಗೆ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್. ನಿಸಾರ್ ಅಹಮದ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ

(ಕಾ. ಮತ್ತು ಸು. ಕಾಫಿಪೋಸ ಮತ್ತು ಅಭಿಯೋಗಗಳು).

**ಅನುಬಂಧ-1**

ಬೆಂಗಳೂರು, ಕೋಲಾರ, ಮಂಡ್ಯ ಮತ್ತು ಬೀದರ್ ಜಿಲ್ಲೆಗಳ ಅಧೀಕ್ಷಕರು ರವರುಗಳು ಸಲ್ಲಿಸಿರುವ ವರದಿಗಳಲ್ಲಿ ಅನಧಿಕೃತವಾಗಿ ಬೆಳೆಯಲಾದ ಗಸಗಸೆ (ಅಫೀಮ್) ವಶಪಡಿಸಿಕೊಂಡಿರುವ ವಿವರಗಳನ್ನು ಈ ಕೆಳಕಂಡಂತೆ ಮಂಡಿಸಿದೆ.

| | ಜಿಲ್ಲೆಯ ಹೆಸರು | ವಶಪಡಿಸಿಕೊಂಡ ಗಸಗಸೆ ಬೆಳೆಯ ಕಚ್ಚಾ ಅಫೀಮು ದಸ್ತಾನಿನ ವಿವರ |
|---|---|---|
| | **ಬೆಂಗಳೂರು ಜಿಲ್ಲೆ** | |
| 1 | ನಂದಗುಡಿ ಪೊಲೀಸ್ ಠಾಣೆ ಮೊಕದ್ದಮೆ ಸಂಖ್ಯೆ: 21/2004, ಕಲಂ 18 ಎನ್.ಡಿ.ಪಿ.ಎಸ್. ಆ್ಯಕ್ಟ್. | ಗಸಗಸೆ ಬೆಳೆಯ (ಕಚ್ಚಾ ಅಫೀಮು) ಅಂದಾಜು ತೂಕ 210 ಕೆ.ಜಿ. |
| 2 | ಹೊಸಕೋಟೆ ಪೊಲೀಸ್ ಠಾಣೆ ಮೊಕದ್ದಮೆ ಸಂಖ್ಯೆ: 112/2004, ಕಲಂ 18 ಎನ್.ಡಿ.ಪಿ.ಎಸ್. ಆ್ಯಕ್ಟ್. | ಗಸಗಸೆ ಬೆಳೆಯ (ಕಚ್ಚಾ ಅಫೀಮು) ಅಂದಾಜು ತೂಕ 98 ಕೆ.ಜಿ. |
| | **ಎಸ್.ಪಿ, ಮಂಡ್ಯ ಜಿಲ್ಲೆ** | |
| 3 | ಅರಕೇರಿ ಪೊಲೀಸ್ ಠಾಣೆ ಮೊಕದ್ದಮೆ ಸಂಖ್ಯೆ: 94/2005, ಕಲಂ 08 ಕ್ಲಾಸ್/ಬಿ/18 ಎನ್.ಡಿ.ಪಿ.ಎಸ್. ಆ್ಯಕ್ಟ್. | ಗಸಗಸೆ ಬೆಳೆಯ (ಕಚ್ಚಾ ಅಫೀಮು) ಅಂದಾಜು ತೂಕ 4,300 ಕೆ.ಜಿ. |
| 4 | ಕಿಕ್ಕೇರಿ ಪೊಲೀಸ್ ಠಾಣೆ ಮೊಕದ್ದಮೆ ಸಂಖ್ಯೆ: 10/2005, ಕಲಂ 08 ಕ್ಲಾಸ್/ಬಿ/18 ಎನ್.ಡಿ.ಪಿ.ಎಸ್. ಆ್ಯಕ್ಟ್. | ಗಸಗಸೆ ಬೆಳೆಯ (ಕಚ್ಚಾ ಅಫೀಮು) ಅಂದಾಜು ತೂಕ 1,320 ಕೆ.ಜಿ. |
| | **ಎಸ್.ಪಿ, ಕೋಲಾರ ಜಿಲ್ಲೆ** | |
| 5 | ಶಿಡ್ಲಘಟ್ಟ (ಗ್ರಾ) ಪೊಲೀಸ್ ಠಾಣೆ ಮೊಕದ್ದಮೆ ಸಂಖ್ಯೆ: 09/2005 | ಗಸಗಸೆ (ಅಫೀಮ್) ಬೆಳೆಯು 2,200 ಕೆ.ಜಿ. |
| 6 | ಮುಳಬಾಗಿಲು ಪೊಲೀಸ್ ಠಾಣೆ ಮೊಕದ್ದಮೆ ಸಂಖ್ಯೆ: 43/2005. | ಗಸಗಸೆ (ಅಫೀಮ್) ಬೆಳೆಯು 262 ಕೆ.ಜಿ. |
| | **ಎಸ್.ಪಿ, ಬೀದರ್ ಜಿಲ್ಲೆ** | |
| 7 | ಚಿಟಗುಪ್ಪಾ ಪೊಲೀಸ್ ಠಾಣೆ ಮೊಕದ್ದಮೆ ಸಂಖ್ಯೆ: 41/2005,ಕಲಂ 08(ಬಿ) ಜೊತೆ 15 ಎನ್.ಡಿ.ಪಿ.ಎಸ್. ಆ್ಯಕ್ಟ್. | ಗಸಗಸೆ ಬೆಳೆಯ (ಕಚ್ಚಾ ಅಫೀಮು) ಅಂದಾಜು ತೂಕ 1.640 ಕೆ.ಜಿ. |
| 8 | ಚಿಟಗುಪ್ಪಾ ಪೊಲೀಸ್ ಠಾಣೆ ಮೊಕದ್ದಮೆ ಸಂಖ್ಯೆ: 43/2005, ಕಲಂ 08(ಬಿ) ಜೊತೆ 15 ಕ್ಲಾಸ್/ಬಿ/18 ಎನ್.ಡಿ.ಪಿ.ಎಸ್. ಆ್ಯಕ್ಟ್. | ಗಸಗಸೆ ಬೆಳೆಯ (ಕಚ್ಚಾ ಅಫೀಮ್) ಅಂದಾಜು ತೂಕ 1,035 ಕೆ.ಜಿ. |
| 9 | ಮನ್ನಾಎಖೇಳ್ಳಿ ಪೊಲೀಸ್ ಠಾಣೆ ಮೊಕದ್ದಮೆ ಸಂಖ್ಯೆ: 30/2005, ಕಲಂ 08(ಬಿ) ಜೊತೆ 15 ಕ್ಲಾಸ್/ಬಿ/18 ಎನ್.ಡಿ.ಪಿ.ಎಸ್. ಆ್ಯಕ್ಟ್. | ಗಸಗಸೆ ಬೆಳೆಯ (ಕಚ್ಚಾ ಅಫೀಮ್) ಅಂದಾಜು ತೂಕ 772 ಕೆ.ಜಿ. |
| 10 | ಮನ್ನಾಎಖೇಳ್ಳಿ ಪೊಲೀಸ್ ಠಾಣೆ ಮೊಕದ್ದಮೆ ಸಂಖ್ಯೆ: 28/2005, ಕಲಂ 08(ಬಿ) ಜೊತೆ 15 ಎನ್.ಡಿ.ಪಿ.ಎಸ್. ಆ್ಯಕ್ಟ್. | ಗಸಗಸೆ ಬೆಳೆಯ (ಕಚ್ಚಾ ಅಫೀಮ್) ಅಂದಾಜು ತೂಕ 3,550 ಕೆ.ಜಿ. |
| 11 | ಮನ್ನಾಎಖೇಳ್ಳಿ ಪೊಲೀಸ್ ಠಾಣೆ ಮೊಕದ್ದಮೆ ಸಂಖ್ಯೆ: 27/2005, ಕಲಂ 08(ಬಿ) ಜೊತೆ 15 ಎನ್.ಡಿ.ಪಿ.ಎಸ್. ಆ್ಯಕ್ಟ್. | ಗಸಗಸೆ ಬೆಳೆಯ (ಕಚ್ಚಾ ಅಫೀಮ್) ಅಂದಾಜು ತೂಕ 2,622 ಕೆ.ಜಿ. |

| | ಜಿಲ್ಲೆಯ ಹೆಸರು | ವಶಪಡಿಸಿಕೊಂಡ ಗಸಗಸೆ ಬೆಳೆಯ ಕಚ್ಚಾ ಅಫೀಮು ದಸ್ತಾನಿನ ವಿವರ |
|---|---|---|
| 12 | ಬಗದಲ ಪೊಲೀಸ್ ಠಾಣೆ ಮೊಕದ್ದಮೆ ಸಂಖ್ಯೆ: 34/2005, ಕಲಂ 08(ಬಿ) (ಸಿ) 20(ಬಿ) (ಸಿ) ಜೊತೆ 15 ಕ್ಲಾಸ್/ಬಿ/18 ಎನ್.ಡಿ.ಪಿ.ಎಸ್. ಆ್ಯಕ್ಟ್. | ಗಸಗಸೆ ಬೆಳೆಯ (ಕಚ್ಚಾ ಅಫೀಮ್) ಅಂದಾಜು ತೂಕ 2,250 ಕೆ.ಜಿ. |
| 13 | ಚಿಟಾಗುಪ್ಪಾ ಪೊಲೀಸ್ ಠಾಣೆ ಮೊಕದ್ದಮೆ ಸಂಖ್ಯೆ: 42/2005, ಕಲಂ 08(ಬಿ) ಜೊತೆ 15 ಕ್ಲಾಸ್/ಬಿ/18 ಎನ್.ಡಿ.ಪಿ.ಎಸ್. ಆ್ಯಕ್ಟ್. | ಗಸಗಸೆ ಬೆಳೆಯ (ಕಚ್ಚಾ ಅಫೀಮ್) ಅಂದಾಜು ತೂಕ 25 ಕೆ.ಜಿ. |

**ಆರ್. ನಿಸಾರ್ ಅಹಮದ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಪಿ.ಆರ್. 1183 ಒಳಾಡಳಿತ ಇಲಾಖೆ
(ಕಾ. ಮತ್ತು ಸು. ಕಾಫಿಪೋಸ ಮತ್ತು ಅಭಿಯೋಗಗಳು).

## INFRASTRUCTURE DEVELOPMENT SECRETARIAT

**Subject:** Release of GoK's share towards cost sharing works-Shimoga-Talaguppa Gauge Conversion project-reg.

**Read:** 1) G.O.No. IDD 93 NSW 2006, dated: 12.03.2007.
2) D.O.Letter No.2006/W-1/SWR/CMKN dated: 05.06.2007 of Additional Member Works, Ministry of Railways, New Delhi.

**PREAMBLE:**

In the Government Order dated: 12.03.2007 read above the State Government have accordeds sanction for signing of MoU with the Ministry of Railways for taking up Shimoga-Talaguppa broad gauge railway project on 50:50 cost sharing basis between the Ministry of Railways and Government of Karnataka and Sharing of 50% (Rs.60.00 crore) of the cost required for completion of this project and targeting the project for commissioning during 2007-08.

2. The Shimoga-Talaguppa gauge conversion project has been included in the Railway Budget 2007-08 and an amount of Rs.70.00 crores has been provided Similarly. Government of Karnataka has to provide matching amount. An amount of Rs.100.00 crores has been provided in the State Budget 2007-08 for the cost sharing for new projects.

3. Ministry of Railways in their letter read at Sl.No.(2) above, have stated that the cost to be borne out for this project works out to Rs.153.00 crores and that the share of GoK is Rs.76.50 crores.

4. Pending signing of MoU and agreement with Railways for taking up this project on 50:50 cost sharing basis Government has agreed to release part of the amount for the project and hence this order.

**GOVERNMENT ORDER NO: IDD 52 NSW 2007, BANGALORE, DATED: 24th July 2007**

In the circumstances mentioned above and subject to the condition of having an MoU with Railways for sharing this project on 50:50 cost sharing basis and getting matching share from the Ministry of Railways, Government of Karnataka is pleased to sanction an amount of Rs.20.00 crore towards the share of the State Government for the Shimoga-Talaguppa gauge conversion railway project.

2. The expenditure shall be met under the Head of Account 5465-01-190-3-05 (Plan)-211-Investments-New Cost sharing for new projects during the year 2007-08.

3. The Chief Financial Officer & Company Secretary, iDeCK is authorized to draw the amount on a payee's receipt duly countersigned by the Under Secretary to Government, Infrastructure Development Department and iDeCK shall in turn deposit the same with the Financial Advisor and Chief Administrative Officer, SWR, Bangalore.

4. This order is issued in accordance with the concurrence of F.D. given vide U.O.N.No.FD 1143 Exp-I/07, dated: 23.07.2007.

By Order and in the name of the Governor of Karnataka,
**N. MANJULA GEETHA**
P.R. 1365 Under Secretary to Government,
Infrastructure Development Department.